

ಭಗವಾನ್ ಶ್ರೀವೇದವ್ಯಾಸ ಪ್ರಣೀತ

# ಮಹಾಭಾರತ



ಸಮಗ್ರ ಶ್ಲೋಕಗಳ ಕನ್ನಡಾನುವಾದ

ಶ್ರೀಮದಾನಂದತೀರ್ಥಭಗವತ್ಪಾದರ ತಾತ್ಪರ್ಯನಿರ್ಣಯ ಹಾಗೂ

ಶ್ರೀವಾದಿರಾಜಗುರುಸಾರ್ವಭೌಮರ ಲಕ್ಷಾಲಂಕಾರದೊಂದಿಗೆ

ಭಾಗ-20

## ಕರ್ಣಪರ್ವ



ಪ್ರಕಾಶಕರು :

ತತ್ವಸಂಶೋಧನಸಂಸತ್ (ರಿ.)

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ

ಶ್ರೀಪಲಿಮಾರು ಮಠ, ಉಡುಪಿ.

॥ ಶ್ರೀರಾಮಶ್ರೀ ॥

॥ ಶ್ರೀವೇದವ್ಯಾಸೋ ವಿಜಯತೇ ॥

### ಭಗವಾನ್ ಶ್ರೀವೇದವ್ಯಾಸ ಪ್ರಣೀತ

# ಮಹಾಭಾರತ

## ಭಾಗ-೨೦

# ಕರ್ಣಪರ್ವ

## (ಸಂಪುಟ ೧)

ಸಮಗ್ರ ಶ್ಲೋಕಗಳ ಕನ್ನಡಾನುವಾದ

(ಶ್ರೀಮದಾನಂದತೀರ್ಥರ ತಾತ್ಪರ್ಯನಿರ್ಣಯ

ಶ್ರೀವಾದಿರಾಜಗುರುಸಾರ್ವಭೌಮರ ಲಕ್ಷಾಲಂಕಾರದೊಂದಿಗೆ)

ಅನುಗ್ರಹ :

**ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**

ಶ್ರೀಹೃಷೀಕೇಶತೀರ್ಥಸಂಸ್ಥಾನಂ, ಪಲಿಮಾರು ಮಠ, ಉಡುಪಿ

ಅನುವಾದ-'ರು :

**ವಿದ್ವಾನ್ ಕೆ.ಹಯವದನ ಪುರಾಣಿಕ**



ಪ್ರಕಾಶಕರು :

**ತತ್ವಸಂಶೋಧನಸಂಸತ್ (ರಿ.)**

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ

ಶ್ರೀಪಲಿಮಾರು ಮಠ, ಉಡುಪಿ.

**ಮಹಾಭಾರತ ಕರ್ಣಪರ್ವ**-ಭಾರತತಾತ್ಪರ್ಯನಿರ್ಣಯ- ಲಕ್ಷಾಲಂಕಾರ ಕನ್ನಡಾನುವಾದದ ಸಮಗ್ರ ಯೋಜನೆಯ ಈ ಕೃತಿಯು ತ್ರೈಲೋಕ್ಯಾಚಾರ್ಯ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಪ್ರತಿಷ್ಠಿತನಾದ ಉಡುಪಿ ಶ್ರೀಕೃಷ್ಣನ ಸನ್ನಿಧಾನದಲ್ಲಿ ಪರಮಪೂಜ್ಯ ಶ್ರೀ ಶ್ರೀವಿದ್ಯಾಧೀಶತೀರ್ಥ ಶ್ರೀಪಾದರ ದ್ವಿತೀಯ ಪರ್ಯಾಯದ ಶುಭಸಂದರ್ಭದಲ್ಲಿ ಅನೇಕ ಪೀಠಾಧಿಪತಿಗಳ ಮತ್ತು ಸಾಧಕರ ಸಮಕ್ಷಮದಲ್ಲಿ ಅನಾವರಣಗೊಂಡಿತು.

**ಮಹಾಭಾರತ ಭಾಗ –**

**ಕರ್ಣಪರ್ವ – ಸಂಪುಟ ೧**



ISBN : 978-81-939819-8-6

**ಈ ಗ್ರಂಥವು ಕರ್ನಾಟಕ ಸರ್ಕಾರದ ಆರ್ಥಿಕ ನೆರವಿನಿಂದ ಮುದ್ರಿತವಾಗಿದೆ**

**ಪುಟಗಳು** - *XXX III+ 587= 620*

**ಮುದ್ರಿತ ಪ್ರತಿಗಳು** - 1000

**ಬೆಲೆ** - **ರೂ. 425/-**

**ಅನುವಾದಕರು** - **ವಿದ್ವಾನ್ ಕೆ.ಹಯವದನ ಪುರಾಣಿಕ**

**ಪ್ರಕಾಶಕರು** - ತತ್ವಸಂಶೋಧನಸಂಸತ್,
(ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯದಿಂದ
ಮಾನ್ಯತೆ ಪಡೆದಿದೆ) ಪಲಿಮಾರು ಮಠ, ಉಡುಪಿ.

**ಪುಟ ಸಂಯೋಜನೆ ಮತ್ತು ಅಕ್ಷರ ಜೋಡಣೆ** - **ಆರ್.ಎಸ್.ಪ್ರೇಮಕುಮಾರ್**
**ಬೆಂಗಳೂರು, 996433428**

**ಗ್ರಂಥಪ್ರಾಪ್ತಿ** - ಪಲಿಮಾರು ಮಠ, ಉಡುಪಿ.

ಮುದ್ರಣ : ಪವನ್ ಪ್ರಿಂಟರ್ಸ್, ಬೆಂಗಳೂರು



ವಾಸಿಷ್ಠಕೃಷ್ಣ ಮಮ ದೇಹಿ ಕರಾವಲಂಬಮ್

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

**ಪರಮಪೂಜ್ಯ ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದರು**

**ಶ್ರೀ ಹೃಷೀಕೇಶತೀರ್ಥ ಸಂಸ್ಥಾನಮ್, ಶ್ರೀಪಲಿಮಾರು ಮಠ, ಉಡುಪಿ.**

---

# ಅನುಗ್ರಹ ಸಂದೇಶ

ಮಹಾಭಾರತದ ಯುದ್ಧದಲ್ಲಿ ಕರ್ಣಪರ್ವ ಒಂದು ಅಪೂರ್ವವಾದ ಘಟ್ಟ. ಶ್ರೀಮದ್ಭಾಗವತದಲ್ಲಿ ಹನ್ನೆರಡು ಪೂಜಾಸ್ಥಾನಗಳನ್ನು ಉಲ್ಲೇಖ ಮಾಡಿದ್ದಾರೆ.

**ಸೂರ್ಯೋಽಗ್ನಿರ್ಬ್ರಾಹ್ಮಣೋ ಗಾವೋ ವೈಷ್ಣವಃ ಖಂ ಮರುಜ್ಜಲಂ।**
**ಭೂರಾತ್ಮಾ ಸರ್ವಭೂತಾನಿ ಭದ್ರ ಪೂಜಾಪದಾನಿ ಮೇ ॥**

ಅದರಲ್ಲಿ ಮೊದಲನೆಯ ಸ್ಥಾನದಲ್ಲಿರುವುದು ಸೂರ್ಯ. ಸೂರ್ಯ ಪ್ರತೀಕದಲ್ಲಿ ಭಗವಂತನನ್ನು ಆರಾಧಿಸುವುದಾಗಿ ಹೇಳುತ್ತಾರೆ. ಅದೇ ಸೂರ್ಯ ರಾಮಾವತಾರದಲ್ಲಿ ಸುಗ್ರೀವನಾಗಿ ಅವತರಿಸಿದರೆ, ಕೃಷ್ಣಾವತಾರದಲ್ಲಿ ಕರ್ಣನಾಗಿ ಅವತರಿಸಿದ್ದಾನೆ. ಪೂಜ್ಯನಾಗಬೇಕಾಗಿದ್ದ ಕರ್ಣ ಇಲ್ಲಿ ವಂಚಕನಾಗುತ್ತಾನೆ. ಇಲ್ಲಿ ಪೂಜೆ ಇಲ್ಲ, ದುಷ್ಪರ ಕೂಟದಲ್ಲಿ ಮೆರೆಯುವಂತಾಗುತ್ತಾನೆ. ಇದು ಕರ್ಣನ ಕರುಣಾಮಯ ಸ್ಥಿತಿಗೆ ಉದಾಹರಣೆ. ಸೂರ್ಯ ಸಮಗ್ರ ವಿಶ್ವಕ್ಕೆ ಕಣ್ಣು. ಬ್ರಹ್ಮಾಂಡವನ್ನೂ ಬೆಳಗಿಸುತ್ತಾನೆ, ಪಿಂಡಾಂಡದಲ್ಲಿ ಒಳ್ಳೆಯ ಜ್ಞಾನವನ್ನೂ ಕೊಡುತ್ತಾನೆ. ಆದರೆ ಈ ಕರ್ಣನಾಗಿ ಭೂಮಿಗೆ ಬಂದಾಗ ಯಾವ ಪ್ರಭಾವವೂ ಇಲ್ಲದೆ 'ಸುದರ್ಶನೀಯ ಕರ್ಣತಃ' ಎಂಬ ಆಚಾರ್ಯರ ವಚನದಂತೆ ಕೇವಲ ಒಳ್ಳೆಯ ಕಿವಿಯನ್ನು ಹೊಂದಿದವನಾಗುತ್ತಾನೆ. ಒಳ್ಳೆಯ ಕಿವಿ ಎಂದರೆ ಹೊರಗಿನಿಂದ ಸುಂದರವಾಗಿದೆ ಹೊರತು ಶ್ರುತಿಯನ್ನು ಕೇಳಬೇಕಾದ ಕಿವಿ ಶ್ರುತಿಯನ್ನು ಬಿಟ್ಟು ಬೇರೆ ಯಾವುದನ್ನೋ ಕೇಳುವಂತಾಗಿದ್ದಾನೆ. ಹಾಗಾಗಿಯೇ ಜ್ಞಾನಮಾರ್ಗಕ್ಕೆ ಕೊಡುಗೆಯನ್ನು ಕೊಡಲು ಸಮರ್ಥನಾಗಲಿಲ್ಲ.

ಶ್ರೀಕೃಷ್ಣ ಭಗವದ್ಗೀತೆಯಲ್ಲಿ-

**'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥'**

ಎಂದು. ಇದಕ್ಕೆ ಒಳ್ಳೆಯ ನಿದರ್ಶನ ರಾಮಾಯಣ-ಮಹಾಭಾರತಗಳು. ಸೂರ್ಯ ಸುಗ್ರೀವನಾಗಿ ಬಂದಾಗ ಭಗವಂತ ಒಳ್ಳೆಯ ಪ್ರಚೋದನೆಯನ್ನು ಕೊಟ್ಟು, ಸುಗ್ರೀವನಿಗೆ ಜಯ ತಂದುಕೊಟ್ಟು, ಅವನಿಗೆ ಪಟ್ಟಾಭಿಷೇಕವನ್ನೂ ಮಾಡಿ ಅವನ ಮೂಲಕ ಸಮಗ್ರ ಯುದ್ಧದ ಕೀರ್ತಿ, ಪುಣ್ಯ ಎಲ್ಲವನ್ನೂ ಕೊಡುತ್ತಾನೆ. ಭಗವಂತನ ಕಾರುಣ್ಯದಿಂದ ಸುಗ್ರೀವನಾಗಿ ಸೂರ್ಯ ಮೆರೆದ. ಅದೇ ಸುಗ್ರೀವ ಕರ್ಣನಾಗಿ ಮತ್ತೆ ಕೃಷ್ಣಾವತಾರದಲ್ಲಿ ಹುಟ್ಟಿದಾಗ ಭಗವಂತನು ಅವನ ಮೇಲೆ ಕಾರುಣ್ಯ ತೋರಿಸುವುದಿಲ್ಲ. ಅವನ ಜ್ಞಾನಕ್ಕೆ ಪ್ರಕಾಶವೇ ಇಲ್ಲವಾಗುತ್ತದೆ. ಭಗವಂತನ ಅನುಗ್ರಹವಿಲ್ಲದಿರುವುದರಿಂದ ಬೆಳಕೂ ಇಲ್ಲ, ಜ್ಞಾನವೂ ಇಲ್ಲ. ಸೂರ್ಯನ ಒಳಗಿದ್ದ ತೇಜಸ್ಸು ಭಗವಂತನದ್ದು ಎಂದು ಹೇಳಿರುವಂತೆ ಅದಕ್ಕೆ ಉದಾಹರಣೆ ಸುಗ್ರೀವ-ಕರ್ಣ. ಇಡೀ ಬ್ರಹ್ಮಾಂಡವನ್ನೇ ಬೆಳಗಿಸುವ ಸೂರ್ಯ ಭಗವಂತನ ಅನುಗ್ರಹವಿಲ್ಲದಿದ್ದಾಗ ಕರ್ಣನಾಗಿ ಅವನೇ ಕತ್ತಲಲ್ಲಿರುವಂತಾಯಿತು.

ಕರ್ಣನ ದುರಂತವೇನೆಂದರೆ ಕುಂತಿಯಲ್ಲಿ ಕ್ಷತ್ರಿಯನಾಗಿ ಜನಿಸಿದರೂ ಅವನಿಗೆ ಕ್ಷತ್ರಿಯ ಸಂಸ್ಕಾರವನ್ನು ಪಡೆಯುವ ಯೋಗವಿಲ್ಲದೆ ವಂಚಿತನಾಗಿ ಸೂತನಾಗಿ, ಕೌಂತೇಯನಾಗಬೇಕಾದವನು ರಾಧೇಯನಾದ. ಇಡೀ ಸಮಾಜ ಅವನನ್ನು ಸೂತ, ಸೂತಪುತ್ರ ಎಂದು ಗುರುತಿಸಿತು. ನಿಜವಾಗಿ ಸೂರ್ಯನೇ ಬಂದು ಸ್ಪರ್ಶ ಮಾತ್ರದಿಂದ ಕುಂತಿಯಲ್ಲಿ ತಾನೇ ಒಂದು ರೂಪದಿಂದ ಅವತರಿಸಿದ. ಆದರೆ ಆ ಸೂರ್ಯನಿಗೆ ಗ್ರಹಣ. ಸಹಸ್ರವರ್ಮ ಎಂಬ ದುಷ್ಟನಿಂದ ಪ್ರಭಾವಿತನಾಗಿ ದಾರಿತಪ್ಪಿದ. ಕುಂತಿಯು ಕರ್ಣ ಹುಟ್ಟಿದಾಗ ಬಹಳ ಸಂತೋಷಪಟ್ಟಿದ್ದಳು. ಸಹಜವಾದ ಕವಚ-ಕುಂಡಲಗಳನ್ನು ಧರಿಸಿ ಹುಟ್ಟಿದ್ದ ಆ ಮಗುವನ್ನು ಬಿಡಲೂ ಮನಸ್ಸೂ ಇಲ್ಲದೆ, ಇಟ್ಟುಕೊಳ್ಳಲೂ ಆಗದೆ ಒದ್ದಾಡಿದಳು. ರಾಜಾಧಿರಾಜನಾಗ ಬೇಕಾಗಿದ್ದ ಕರ್ಣ ಪೆಟ್ಟಿಗೆಯಲ್ಲಿ ತೇಲಿಬಿಟ್ಟು ಸೂತನ ಬಳಿ ಬೆಳೆದು ಸೂತಪುತ್ರ ನೆಂದೇ ವಿಖ್ಯಾತನಾದ.

ವಿದ್ಯೆಯಲ್ಲೂ ಅಷ್ಟೇ ಕರ್ಣ ವಂಚಿತನಾದ. ಒಂದುವೇಳೆ ಕೌಂತೇಯನೇ ಆಗಿದ್ದರೆ ಪಾಂಡವರ ಜೊತೆಗೇ ವಿದ್ಯಾಭ್ಯಾಸವಾಗಿ ತಾನೂ ಮೆರೆಯುತ್ತಿದ್ದ. ಆಸೆಯಿಂದ ದ್ರೋಣರ ಗುರುಕುಲಕ್ಕೆ ಸೇರಲು ಬಂದಾಗ ಅವನ ಆಸೆ ಈಡೇರಲಿಲ್ಲ. ಆಗ ಪರಶುರಾಮರ ಬಳಿ ಹೋಗಿ ಅವರಲ್ಲಿ ಬ್ರಾಹ್ಮಣ ಎಂದು ಹೇಳಿ ಅರ್ಜುನನಿಗಿಂತ ಕಡಿಮೆಯಿಲ್ಲವೆಂದು ತೋರಿಸುವಷ್ಟು ವಿದ್ಯೆಯನ್ನು ಸಂಪಾದನೆ

ಮಾಡುತ್ತಾನೆ. ಆದರೆ ಪರಶುರಾಮರು ಕರ್ಣನ ತೊಡೆಯ ಮೇಲೆ ಮಲಗಿದ್ದಾಗ ಒಂದು ಕೀಟ ಅವನ ತೊಡೆಯನ್ನು ಸೀಳಿ ರಕ್ತವನ್ನು ಸುರಿಸಿದರೂ ಅವನು ಅದನ್ನು ತಡೆದುಕೊಂಡು ಕುಳಿತಿದ್ದ. ರಕ್ತ ಪರಶುರಾಮರ ಮೇಲೆ ಬಿದ್ದಾಗ ಅವರು ನೀನು ಕ್ಷತ್ರಿಯನೇ ಹೊರತು ಬ್ರಾಹ್ಮಣನಲ್ಲ ಎಂದು ಕೋಪಗೊಂಡು ಅವರಿಂದ ಕರ್ಣನು ತಿರಸ್ಕೃತನಾಗುತ್ತಾನೆ. ಬ್ರಾಹ್ಮಣನಾಗಿದ್ದರೆ ರಕ್ತವನ್ನು ನೋಡಿಯೂ ಇಷ್ಟು ಸಹನಶಕ್ತಿ ಇರುತ್ತಿರಲಿಲ್ಲ. ಆಗಲೇ ಪರಶುರಾಮರು ಶಾಪಕೊಡುತ್ತಾರೆ. ನೀನು ಸ್ಪರ್ಧೆ ಮಾಡಿದಾಗ ನಿನಗೆ ಜಯದೊರಕುವುದಿಲ್ಲ ಎಂದು. ಇದು ಕರ್ಣನ ದುರಂತಕ್ಕೆ ಒಂದು ಜ್ವಲಂತ ಉದಾಹರಣೆ.

ಪಾಂಡವರ ವಿದ್ಯಾಪರೀಕ್ಷೆಯ ದೊಡ್ಡ ಉತ್ಸವದಲ್ಲಿ ಅರ್ಜುನನ ಶಸ್ತ್ರವಿದ್ಯೆಯನ್ನು ನೋಡಿ ಎಲ್ಲರೂ ಸಂತೋಷಪಡುತ್ತಿದ್ದಾಗ ತಾನೂ ಕಡಿಮೆಯಿಲ್ಲ ಎಂದು ಕರ್ಣನು ತೋರಿಸುತ್ತಾನೆ. ಆದರೆ ಅಕ್ಷತ್ರಿಯ ಎಂಬ ಕಾರಣದಿಂದ ಯುದ್ಧಕ್ಕೆ ಅವಕಾಶ ಸಿಗುವುದಿಲ್ಲ. ಆಗಲೇ ದುರ್ಯೋಧನನು ಅಂದರೆ ಸಾಕ್ಷಾತ್ ಕಲಿಯು ಕರ್ಣನನ್ನು ಆಲಂಗಿಸುತ್ತಾನೆ. ಮೊದಲೇ ಮೇಲಿನಿಂದ ಕೆಳಕ್ಕೆ ಬೀಳುತ್ತಿದ್ದ ಕರ್ಣನ ಅವನತಿಗೆ ಇನ್ನೊಂದು ಮೆಟ್ಟಿಲು ಸಿಕ್ಕಿ ಇನ್ನೂ ಕೆಳಗಿಳಿದ. ಭೀಮಸೇನನು ಸಂಪಾದನೆ ಮಾಡಿದ ಅಂಗರಾಜ್ಯವನ್ನು ದುರ್ಯೋಧನ ತನ್ನದೆಂದು ಹೇಳಿ ಕರ್ಣನಿಗೆ ಅಂಗರಾಜ್ಯದ ಪಟ್ಟಾಭಿಷೇಕ ಮಾಡಿ ಕ್ಷತ್ರಿಯ ಎಂದು ಘೋಷಣೆ ಮಾಡುತ್ತಾನೆ. ಕಲಿಯ ಪ್ರಭಾವ ಹೀಗೆಯೇ. ಯಾರನ್ನಾದರೂ ಕ್ಷತ್ರಿಯನನ್ನಾಗಿ ಮಾಡಬಲ್ಲ, ಯಾರನ್ನಾದರೂ ಕೆಳಗಿಳಿಸಬಲ್ಲ. ಇದು ಕಲಿಯುಗ. ಯಾರು ಬೇಕಾದರೂ ಬ್ರಾಹ್ಮಣರಾಗಬಹುದು, ಯಾರು ಏನು ಬೇಕಾದರೂ ಆಗಬಹುದು. ಕಲಿ ಕ್ಷತ್ರಿಯ ಸಂಸ್ಕಾರರಹಿತನಾದ ಕರ್ಣನನ್ನು ಹೇಗೆ ಕ್ಷತ್ರಿಯ-ಚಕ್ರವರ್ತಿ ಎಂದು ಅನ್ಯದೇಶದಲ್ಲಿ ಪಟ್ಟಾಭಿಷೇಕ ಮಾಡಿ ಘೋಷಣೆ ಮಾಡಿದನೋ ಅದನ್ನು ಒಂದು ದೊಡ್ಡ ಸ್ಥಾನಮಾನ ಎಂದು ತಿಳಿದುಕೊಳ್ಳಲು ಆಗುವುದಿಲ್ಲ. ಅಖಂಡ ದೇಶದ ರಾಜನಾಗಬೇಕಾಗಿದ್ದ ಕರ್ಣ ಯಾವುದೋ ಒಂದು ತುಂಡು ಅಂಗದೇಶದ ರಾಜನಾದ. ಕರ್ಣ ವಂಚಿತನಾದ. ದುರ್ಯೋಧನನ ಕಣ್ಣೀರಿಗೆ ಕರ್ಣ ಉಪಕರಣನಾದ. ಮಹಾಭಾರತದಲ್ಲಿ ಕರ್ಣ ದಿನದಿಂದ ದಿನಕ್ಕೆ ಕೆಳಗೆ ಬೀಳುವುದನ್ನು ತೋರಿಸುತ್ತದೆ. ಗೆಲ್ಲುವ ಪಕ್ಷದಲ್ಲಿ ಮೆರೆಯಬೇಕಾಗಿದ್ದ ಕರ್ಣ ಸೋಲುವ ಪಕ್ಷಕ್ಕೆ ನಾಯಕನಾಗಿ ಮೆರೆಯುತ್ತಾನೆ.

ದ್ರೌಪದಿಯ ಸ್ವಯಂವರದಲ್ಲೂ ದುರ್ಯೋಧನನಿಗೋಸ್ಕರ ಎಂದು ಘೋಷಣೆ ಮಾಡಿ ಸ್ಪರ್ಧೆಗೆ ಇಳಿದು ಸೋತ. ಹೀಗೆ ಕರ್ಣ ಗೋಗ್ರಹಣ, ಉತ್ತರಗೋಗ್ರಹಣ, ಎಲ್ಲದರಲ್ಲಿಯೂ ಸೋಲನ್ನು ಅನುಭವಿಸುತ್ತಾನೆ. ಕೊನೆಗೆ ಮಹಾಭಾರತ ಯುದ್ಧದಲ್ಲೂ ಪ್ರಾರಂಭದಲ್ಲೇ ಭೀಷ್ಮರು ಅರ್ಧರಥ ಎಂದು ಹೇಳಿ ಅವಮಾನ ಮಾಡಿದಕ್ಕಾಗಿ ಭೀಷ್ಮರು ಇರುವಷ್ಟು ದಿನ ಯುದ್ಧ ಮಾಡುವುದಿಲ್ಲ ಎಂದು ಕೆಟ್ಟ ಪ್ರತಿಜ್ಞೆ ಮಾಡಿ ಹಿಂದಕ್ಕೆ ಸರಿದ. ಭೀಷ್ಮರು ಶರತಲ್ಪಕ್ಕೆ ಏರಿದ ಮೇಲೆ ಕರ್ಣನು ಮಹಾಭಾರತ ಯುದ್ಧದಲ್ಲಿ ಭಾಗವಹಿಸುತ್ತಾನೆ. ಕಡೆಗೆ ದ್ರೋಣರ ನಿಧನದ ನಂತರ ದುರ್ಯೋಧನನಿಂದ ಕರ್ಣನೇ ಸೇನಾಪತ್ಯವನ್ನು ವಹಿಸಿಕೊಳ್ಳು ತ್ತಾನೆ. ಯುದ್ಧಕ್ಕಾಗಿ ಶಲ್ಯನನ್ನು ಸಾರಥಿಯನ್ನಾಗಿ ಬಯಸಿದಾಗ ದುರ್ಯೋಧನ ತನ್ನ ಎಲ್ಲ ಪ್ರಭಾವವನ್ನು ಬೀರಿ ಶಲ್ಯನನ್ನು ಸಾರಥಿಯನ್ನಾಗಿ ಮಾಡುತ್ತಾನೆ. ಶಲ್ಯಭೂಪತಿ ಸಾರಥಿಯ ಕೆಲಸವನ್ನು ಒಪ್ಪದಿದ್ದಾಗ ದುರ್ಯೋಧನನು ತನ್ನ ಕುತಂತ್ರ ಉಪಯೋಗಿಸಿ 'ಅರ್ಜುನನಿಗೆ ಹೇಗೆ ಕೃಷ್ಣನು ಸಾರಥಿಯೋ ಹಾಗೆ ಕರ್ಣನಿಗೆ ನೀನು ಸಾರಥಿ' ಎಂದು ಹೇಳಿ ಶಲ್ಯನನ್ನು ಒಪ್ಪಿಸುತ್ತಾನೆ. ಅದು ಕರ್ಣನ ಪಾಲಿನ ಅವನತಿಗೇ ಕಾರಣವಾಗುತ್ತದೆ. ಏಕೆಂದರೆ ಶಲ್ಯನು ಯಾವಾಗಲೂ ಅರ್ಜುನನನ್ನು ಪ್ರಶಂಸೆ ಮಾಡಿದನೇ ಹೊರತು ಕರ್ಣನ ಬಗ್ಗೆ ಎಲ್ಲಿಯೂ ಹೊಗಳಲಿಲ್ಲ. ಹಾಗಾಗಿ ಕರ್ಣನಿಗೆ ಶಲ್ಯನ ಸಾರಥ್ಯ ಶಾಪವೇ ಆಯಿತು.

ಕರ್ಣ ನಾಗಾಸ್ತ್ರವನ್ನು ಬಿಟ್ಟಾಗ ಶಲ್ಯ ಆಗಲೂ ಬಾಣವನ್ನು ಕಂಠಕ್ಕೆ ಗುರಿ ಇಟ್ಟಿರುವಿ, ಇದು ಸರಿಯಲ್ಲ. ಏಕೆಂದರೆ ಸ್ವಲ್ಪ ಅರ್ಜುನ ತಲೆ ತಗ್ಗಿಸಿದರೆ ಅದು ಕಿರೀಟಕ್ಕೆ ಬೀಳುತ್ತದೆ. ಕರ್ಣ ತನ್ನ ಗುರಿಯನ್ನು ಬದಲಾಯಿಸದೆ ದುರಹಂಕಾರ ದಿಂದ ನಾಗಾಸ್ತ್ರವನ್ನು ಪ್ರಯೋಗಿಸಿದಾಗ ಕೃಷ್ಣನು ರಥವನ್ನು ಭೂಮಿಯಲ್ಲಿ ನಾಲ್ಕು ಅಂಗುಲ ಮುಳುಗಿಸಿದ್ದರಿಂದ ನಿಷ್ಪ್ರಯೋಜನವಾಯಿತು. ಪುನಃ ಆ ಅಸ್ತ್ರವನ್ನು ವಾಪಸ್ಸು ಬಂದು ನನ್ನನ್ನು ಮತ್ತೊಮ್ಮೆ ಪ್ರಯೋಗ ಮಾಡು ಎಂದಾಗ ಒಮ್ಮೆ ಹೂಡಿದ ಅಸ್ತ್ರವನ್ನು ನಾನು ಮತ್ತೊಮ್ಮೆ ಹೂಡುವುದಿಲ್ಲ ಎಂದು ಮತ್ತೊಂದು ಕೆಟ್ಟ ಪ್ರತಿಜ್ಞೆಯನ್ನು ಕರ್ಣನು ಮಾಡುತ್ತಾನೆ. ಕಡೆಗೆ ಕರ್ಣನ ರಥದ ಚಕ್ರ ಕೆಸರಿನಲ್ಲಿ ಹೂತು ಅರ್ಜುನನಿಂದ ಹತನಾಗುತ್ತಾನೆ. ಕರ್ಣನ ಕಥೆ ಒಂದು ದಾರುಣ ಕಣ್ಣೀರು ಸುರಿಸುವಂತಹದ್ದು.

ಸೂರ್ಯನು ಇಡೀ ಜಗತ್ತಿಗೆ ಬೆಳಕು ಚೆಲ್ಲಿ ಸರಿಯಾದ ಮಾರ್ಗದರ್ಶನ

ಮಾಡುತ್ತಾನೆ. ಆದರೆ ಕರ್ಣನ ಜೀವನ ರಾತ್ರಿಯೇ ಆಗಿ ಕಳೆಯಿತು. ಯಾವುದು ಸರಿ, ಯಾವುದು ತಪ್ಪು ಎಂದು ತಿಳಿದುಕೊಳ್ಳಲು ಕರ್ಣನ ಪಾಲಿಗೆ ಆಯಿತು. ಕೃಷ್ಣನು ಸಂಧಿಗಾಗಿ ಹೋದಾಗ ಕರ್ಣನನ್ನು ಕರೆದುಕೊಂಡು ತನ್ನ ರಥದಲ್ಲಿ ಕೂರಿಸಿ ಕೊಂಡು ಕರ್ಣನ ಜನ್ಮರಹಸ್ಯವನ್ನು ಹೇಳುತ್ತಾನೆ. ಪಾಂಡವರ ಪಕ್ಷಕ್ಕೆ ಬಂದರೆ ನಿನಗೇ ಪಟ್ಟಾಭಿಷೇಕ ಎಂದೂ ಸಹ ಹೇಳುತ್ತಾನೆ. ಕೃಷ್ಣನು ಹೇಳಿದ ಮಾತನ್ನು ಕರ್ಣ ಪ್ರೀತಿಯಿಂದ ಒಪ್ಪಿ ಭಕ್ತಿಯಿಂದ ಅನುಷ್ಠಾನಕ್ಕೆ ತಂದಿದ್ದರೆ ಈ ದಾರುಣ ಪರಿಸ್ಥಿತಿ ಕರ್ಣನ ಪಾಲಿಗೆ ಬರುತ್ತಿರಲಿಲ್ಲ. ಆದರೆ ದುರ್ಯೋಧನನ ಆಕರ್ಷಣೆ, ಅವನು ಅಂಗಸ್ಪರ್ಶ ಮಾಡಿದ್ದರ ದುಷ್ಪರಿಣಾಮ ಸಾಕ್ಷಾತ್ ಭಗವಂತ ಕರ್ಣನ ಪರಿಚಯ ಹೇಳಿದರೂ ಅದನ್ನು ಸ್ವೀಕರಿಸದೆ ದುರಂತ ಸ್ಥಿತಿಗೆ ತಲುಪಿದ್ದಕ್ಕೆ ಒಂದು ಜ್ವಲಂತ ಉದಾಹರಣೆ.

ಕರ್ಣನ ಸ್ಥಿತಿ ಏಕೆ ಹೀಗಾಯಿತು ಎಂದು ಆಲೋಚಿಸುವುದಾದರೆ ರಾಮಾಯಣದಲ್ಲಿ ಸುಗ್ರೀವನಾಗಿ ಮಾಡಬಾರದ ಕೆಲಸವನ್ನು ಮಾಡಿದ್ದ. ಅಣ್ಣನ ಮರಣಕ್ಕೆ ಕಾರಣನಾದ, ಅವನ ಆಸ್ತಿಯನ್ನು ಲಪಟಾಯಿಸಿದ, ಅಣ್ಣನ ಹೆಂಡತಿ ಯಾದ ತಾರೆಯನ್ನು ಬಲಾತ್ಕರಿಸಿದ. ಇದೆಲ್ಲಾ ಸುಗ್ರೀವ ಮಾಡಿದ ದೋಷ. ಇದೆಲ್ಲಕ್ಕಿಂತ ದೊಡ್ಡ ದೋಷವೆಂದರೆ ವಾಲಿಯನ್ನು ಕೊಂದ ದೋಷ. ವಾಲಿ ಯೋಗ್ಯತೆಯಲ್ಲೂ ಸೂರ್ಯನಿಗಿಂತ ದೊಡ್ಡವನಾದ ಇಂದ್ರ. ವಾಲಿಯನ್ನು ಕೊಲ್ಲಿಸಿದ ದೊಡ್ಡ ದೋಷದಿಂದಾಗಿ ಒಬ್ಬ ದೈತ್ಯನ ಆವೇಷಕ್ಕೆ ಒಳಗಾಗಿ ಇಷ್ಟೆಲ್ಲಾ ದುರ್ಯೋಧನನ ಕಪಿಮುಷ್ಟಿಯಲ್ಲಿ ಸೇರಿಕೊಂಡು ಪಾಂಡವರನ್ನೂ, ವಿದ್ಯಾ ದೇವತೆಯಾಗಿರುವ ದ್ರೌಪದಿಯನ್ನೂ, ಅದಕ್ಕಿಂತಲೂ ಮಿಗಿಲಾಗಿ ಜೀವೋತ್ತಮ ರಾದ ವಾಯುದೇವರ ಅವತಾರವಾದ ಭೀಮಸೇನನನ್ನೂ, ಅದಕ್ಕಿಂತಲೂ ಮಿಗಿಲಾಗಿ ಸರ್ವೋತ್ತಮನಾದ ಕೃಷ್ಣನಿಂದ ದೂರಕ್ಕಿರಬೇಕಾದ ಪ್ರಸಂಗ ಅವನ ಪಾಲಿಗೆ ಬಂತು.

ಅಂತೂ ಕರ್ಣ ಒಂದು ರೀತಿಯಲ್ಲಿ ಶಾಪಗ್ರಸ್ಥನೇ. ಸೂರ್ಯ ಹೇಗಿರಬಾರದು ಎಂಬುದಕ್ಕೆ ಕತ್ತಲೆಯಲ್ಲೇ ಇದ್ದ ಕರ್ಣ ಒಂದು ಉದಾಹರಣೆ. ಕೆಟ್ಟವರ ಸಂಗ ಮಾಡಬಾರದು, ಸುಳ್ಳು ಹೇಳಬಾರದು ಇದಕ್ಕೆಲ್ಲಾ ಉದಾಹರಣೆ ಕರ್ಣ.

ಕರ್ಣಪರ್ವವನ್ನು ನಮ್ಮ ವಿದ್ವಾನ್ ಹಯವದನ ಪುರಾಣಿಕರು ಕನ್ನಡಕ್ಕೆ

ಭಾಷಾಂತರ ಮಾಡಿದ್ದಾರೆ. ಅವರ ಸಂಶೋಧನಾತ್ಮಕವಾದಂತಹ ಅನುವಾದ ಇಲ್ಲಿ ಮೂಡಿಬಂದಿದೆ. ಬೇರೆ ಬೇರೆ ಪಾಠಾಂತರಗಳನ್ನು ಉಲ್ಲೇಖ ಮಾಡಿ ಅಷ್ಟು ಪಾಠಗಳಿಗೂ ಅರ್ಥವನ್ನು ಇಲ್ಲಿ ಬರೆದಿದ್ದಾರೆ. ಇಂತಹ ಇಳಿವಯಸ್ಸಿನಲ್ಲಿ, ಬಿಡುವಿಲ್ಲದ ಸಮಯದಲ್ಲೂ ಕರ್ಣಪರ್ವದ ಎರಡು ಭಾಗಗಳನ್ನು ಸುಂದರವಾಗಿ ಅನುವಾದ ಮಾಡಿಕೊಟ್ಟ ಹಯವದನ ಪುರಾಣಿಕರಿಗೆ ತುಂಬು ಹೃದಯದಿಂದ ಅಭಿನಂದಿಸುತ್ತೇವೆ. ಇದಗೆ ಅಧ್ಯಯನವನ್ನು ಮಾಡಿದರೆ ಲೇಖಕರ ಶ್ರಮ ಸಾರ್ಥಕ. ಇಂತಹ ಒಳ್ಳೆಯ ಕಾರ್ಯ ನಿರಂತರ ಅವರಿಂದ ನಡೆಸಲಿ. ಇದೆಲ್ಲದರ ಬೆನ್ನೆಲುಬಾದಂತಹ ಡಾ|| ಬೆ.ನಾ.ವಿಜಯೀಂದ್ರಾಚಾರ್ಯರವರನ್ನು ಬೆನ್ನುತಟ್ಟಿ ನಾವು ಹುರಿದುಂಬಿಸುತ್ತಾ ವಿಶೇಷವಾಗಿ ಅವರ ಸೇವೆ ಹರಿಗುರುಗಳಿಗೆ ಮುಟ್ಟಿದೆ, ಅವರನ್ನು ಹರಿಸಲಿ ಎಂದು ಆ ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

ನಾರಾಯಣ ಸ್ಮರಣೆಗಳು
**ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**
ಶ್ರೀ ಪಲಿಮಾರು ಹೃಷೀಕೇಶ ಮಠ, ಉಡುಪಿ.

# ಪ್ರಕಾಶಕರ ನುಡಿ

ಮಹಾಭಾರತದಲ್ಲಿ ದುರ್ಯೋಧನನ ಅಂತರ್ಮುಖವನ್ನು ಸ್ಪಷ್ಟವಾಗಿ ಅರ್ಥೈಸಿಕೊಳ್ಳಲು ಮಾಧ್ಯಮನಾದವನು ಕರ್ಣ. ಸೂರ್ಯದೇವನಿಂದ ಕುಂತಿಯ ಮೂಲಕ ಬಾಲ್ಯದಲ್ಲಿಯೇ ಸಂಜಾತನಾದ ಕರ್ಣನಲ್ಲಿ ವಯಸ್ಸಿಗೆ ಅನುಗುಣವಾದ ವರ್ತನೆಗಳು ಅನೇಕಬಾರಿ ಕಂಡುಬಂದಿಲ್ಲ. ಇವನ ಅವಸರದ ಜನ್ಮವೇ ಇವನ ಕೆಲವೊಂದು ಅವಸರದ ಪ್ರವೃತ್ತಿಗೆ ಕಾರಣವಾಗಿರಬಹುದು. ಅಥವಾ ಕ್ಷತ್ರಿಯೋಚಿತ ಸಂಸ್ಕಾರಗಳ ಅಲಾಭವು ಕರ್ಣನನ್ನು ಉದಾತ್ತಗುಣಗಳಿಂದ ವಂಚಿತರನ್ನಾಗಿಸಿರಬಹುದು. ಮಾರ್ತಾಂಡ ಸಂಜಾತನಾದ ಕರ್ಣನು ಸೂರ್ಯನಂತೆ ಬೆಳಗುವ ತನ್ನ ವ್ಯಕ್ತಿತ್ವವನ್ನು ರಾಹುವಿನಂತೆ ಇರುವ ದುರ್ಯೋಧನನನ್ನು ಆಶ್ರಯಿಸಿಕೊಂಡು ಮರೆಮಾಚಿಕೊಂಡ. ಮೂಲಭೂತವಾಗಿ ಕರ್ಣನದ್ದು ತ್ಯಾಗ, ಔದಾರ್ಯ, ನಿಷ್ಠೆ, ಪ್ರೇಮ, ಗೌರವ ಇತ್ಯಾದಿ ಅನೇಕ ಗುಣಗಳ ವ್ಯಕ್ತಿತ್ವ. ಆದರೆ ಇದರ ವಿನಿಯೋಗವು ಯೋಗ್ಯವಾದ ಸ್ಥಳದಲ್ಲಿ ನಡೆಯಲಿಲ್ಲ ಎಂಬುದೇ ವಿಪರ್ಯಾಸ.

ಸೂರ್ಯೋಪಾಸಕನಾದ ಕರ್ಣ ಸೂತನಾದ ಅಧಿರಥನ ಸುತನಾಗಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡ. ಉತ್ತಮರಾದ ಭೀಷ್ಮ–ದ್ರೋಣಾದಿಗಳಿಗೆ ಮರಿಮೊಮ್ಮಗ–ಶಿಷ್ಯನಂತೆ ಬದುಕಬೇಕಿದ್ದ ಕರ್ಣ ಸೂತರ ಸಂಸ್ಕಾರಗಳು. ನೀಚಜನರ ಆಶ್ರಯ ಇವುಗಳಿಂದ ಅಶಿಕ್ಷಿತ, ಅಮಾನವೀಯ ಜನರಂತೆ ಬಹುತೇಕ ತನ್ನ ಬದುಕಿನಲ್ಲಿ ವರ್ತಿಸಿದ್ದಾನೆ. ಹೀಗೆಂದ ಮಾತ್ರಕ್ಕೆ ಕರ್ಣನು ದುರ್ಯೋಧನ, ದುಶ್ಶಾಸನ, ಶಕುನಿಯರಂತೆ ಪೂರ್ಣದುಷ್ಟನಲ್ಲ. ಅಂತರ್ಮುಖದ ತನ್ನ ವ್ಯಕ್ತಿತ್ವವನ್ನೇ ಕಾಣದಿರುವ ಮಂದಭಾಗ್ಯ ಕರ್ಣ ಎನ್ನಬಹುದು. ವಂಚನೆಯಿಲ್ಲದೆ ಅರ್ಜುನನನ್ನಂತಹ ಗಾಂಡೀವಿಯನ್ನು ಎದುರಿಸುವ ಪೌರುಷವು, ಪರುಶರಾಮನಲ್ಲಿ ಕಲಿತ ವಿದ್ಯೆಯಿಂದ ಕರ್ಣನಲ್ಲಿ ಒದಗಿಬಂದಿತ್ತು. ಹೀಗಿದ್ದರೂ ಬ್ರಹ್ಮಶಾಪದ ಹಿನ್ನೆಲೆಯಲ್ಲಿ ಕೈತುತ್ತು ಬಾಯಿಗಿಲ್ಲವಾಯಿತು ಎಂಬಂತೆ ಅರ್ಜುನನ ಮುಂದೆ ಕರ್ಣನ ಯುಕ್ತಿ, ಶಸ್ತ್ರ ಅಸ್ತ್ರಗಳೆಲ್ಲವೂ ವಿಫಲವಾದವು. ಸ್ವಾಮಿನಿಷ್ಠೆಯಿಂದ ಕರ್ಣನು ಅಲ್ಲಲ್ಲಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡಿದ್ದಾನೆ. ಯುದ್ಧಭೂಮಿಯಲ್ಲಿ ಅರ್ಜುನನ ಪಾಲಿಗೆ ಇಟ್ಟುಕೊಂಡಿರುವ ಬಾಣವನ್ನು ಸ್ವಾಮಿನಿಷ್ಠೆಯಿಂದಲೇ ಘಟೋತ್ಕಚನ ಮೇಲೆ ಎಸೆಯುತ್ತಾನೆ. ದುರ್ಯೋಧನನ ಪ್ರೀತಿಗಾಗಿ ದ್ರೌಪದೀ ಮತ್ತು ಪಾಂಡವರನ್ನು ಕೀಳುಮಟ್ಟದ ಭಾವನೆಗಳಿಂದ ಆಧುನಿಕ ಪಡ್ಡೆ ಹುಡುಗರು

ಹುಡುಗಿಯರನ್ನು ಚುಡಾಯಿಸುವಂತೆ ಕರ್ಣನು ವರ್ತಿಸಿದ್ದಾನೆ. ಇದಕ್ಕೆಲ್ಲಾ ಇವನ್ನಲ್ಲಿ ತುಂಬಿದ ದುಷ್ಪಶಕ್ತಿಯು ಒಂದಾದರೆ, ಅತಿಯಾದ ದುಷ್ಟರ ಸಂಪರ್ಕವು ಮುಖ್ಯ ಕಾರಣವಾಗಿದೆ.

ಹೀಗಿದ್ದರೂ ಕರ್ಣನು ಸೂರ್ಯೋಪಾಸನೆಯಿಂದ ಅಂತಃಸತ್ತ್ವವನ್ನು ಬೆಳಗಿಸಿಕೊಂಡ. ಸಭೆಯ ಮಧ್ಯದಲ್ಲಿ ಸಹಸ್ರಜನರ ಮುಂದೆ ಅಧಿರಥನನ್ನು ನಮಿಸುವ ಪಿತೃಭಕ್ತಿಯನ್ನು ತೋರಿಸಿಕೊಂಡ. ಕುಂತಿಯ ಮಾತೃತ್ವಕ್ಕೆ ಬೆಲೆಕೊಟ್ಟು ಅವಳಿಗೂ ವರವನ್ನು ನೀಡಿದ. ತನ್ನ ಅಭೇದ್ಯವಾದ ಕವಚವನ್ನೇ ಇಂದ್ರನಿಗೆ ಸಮರ್ಪಿಸಿದ. ಭೀಷ್ಮರ ಪತನವಾದಾಗ ತನ್ನ ಪಾಲಿನ ಕಡುವೈರಿ ಎನಿಸಿದ ಭೀಷ್ಮರ ಅಡಿಗಳಿಗೆ ಹೋಗಿ ಎರಗಿದ. ದುರ್ಯೋಧನನಿಗೆ ಆಪತ್ತು ಒದಗಿದಾಗಲು ಅವನಿಗೆ ಪ್ರಾಣತೆತ್ತು ಹೋರಾಡಿದ.

ಹೀಗೆ ಜಗತ್ತನ್ನೇ ಮೆಚ್ಚಿಸುವ ಅಂತಃಸತ್ತ್ವ ವಿದ್ಯೆ, ಭಕ್ತಿ, ಔದಾರ್ಯ, ಜ್ಞಾನ ಈ ಎಲ್ಲ ಗುಣಗಳು ಮೂರ್ತಿಮತ್ತಾಗಿ ಇವನಲ್ಲಿ ನಿಂತಿದ್ದರೂ ಪ್ರಾಯೋಗಿಕವಾಗಿ ಇವನ ಈ ಗುಣಗಳು ಜಗತ್ತನ್ನು ಮುಟ್ಟಲಿಲ್ಲ. ಕರ್ಣನ ನೈಜವಾದ ಗುಣಗಳು ಜಗತ್ತಿಗೆ ಕಾಣಿಸದೇ ಅ ಸಹಜವಾದ ದುಷ್ಟರ ಸಹವಾಸದಿಂದ ಅಭಿವ್ಯಕ್ತವಾದ ದುರ್ಗುಣಗಳೇ ಜನರೆಲ್ಲ ಕಾಣುವಂತಾಯಿತು.

ಕರ್ಣನ ವ್ಯಕ್ತಿತ್ವದ ಬಗ್ಗೆ ಹತ್ತಾರು ಲೇಖನಗಳು ಬಂದಿವೆ. ಕರ್ಣನ ನೈಜವ್ಯಕ್ತಿತ್ವವನ್ನು ವ್ಯಾಸರ ಮಾತಿನ ಮೂಲಕವೇ ಅರ್ಥೈಸಿಕೊಳ್ಳಲು ವಿದ್ವಾನ್ ಕೆ.ಹಯವದನ ಪುರಾಣಿಕರ ಅನುವಾದ ಅತ್ಯಂತ ಸಹಕಾರಿಯಾಗಿಗದೆ. ನಾಡಿನ ಹಿರಿಯ ವಿಮರ್ಶಕ ವಿದ್ವಾಂಸರಾದ ಶ್ರೀಯುತ ಹಯವದನ ಪುರಾಣಿಕರು ಕರ್ಣಪರ್ವವನ್ನು ಬಹಳ ಸುಂದರವಾಗಿ ಅನುವಾದಿಸಿಕೊಟ್ಟು, ಬಹಳ ಉಪಕಾರ ಮಾಡಿರುತ್ತಾರೆ. ಇವರಿಗೆ ತತ್ತ್ವಸಂಶೋಧನ ಸಂಸತ್ತಿನ ವತಿಯಿಂದ ನಮಸ್ಕಾರ ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಅದೇ ರೀತಿಯಲ್ಲಿ ಗ್ರಂಥದ ಪ್ರಕಟಣೆ ಮಾಡುವ ವಿಷಯದಲ್ಲಿ ಆರ್ಥಿಕವಾಗಿ ನಮಗೆ ಸಹಕಾರ ನೀಡಿದ, ನೀಡುತ್ತಿರುವ ಕರ್ನಾಟಕ ಸರ್ಕಾರಕ್ಕೆ ಎಲ್ಲ ಪದಾಧಿಕಾರಿಗಳಿಗೆ ನಮ್ಮ ಸಂಸತ್ತಿನಿಂದ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಣೆ ಮಾಡುತ್ತಿದ್ದೇವೆ.

ಇಂತಹ ಶ್ರೀಮನ್ಮಹಾಭಾರತದ ಶುದ್ಧಪಾಠದ ಮುದ್ರಣವೆಂಬ ಮಹತ್ಕಾರ್ಯವನ್ನು ಕೈಗೆತ್ತಿಕೊಂಡು, ಅದಕ್ಕೆ ಸಂಬಂಧಪಟ್ಟ ವಿದ್ವಾಂಸರನ್ನು ಒಟ್ಟುಗೂಡಿಸಿ, ಪ್ರಾಚೀನ ಹಸ್ತಪ್ರತಿಗಳ ಸಂಶೋಧನೆಯನ್ನು ಮಾಡಿಸಿ, ಆಧ್ಯಾತ್ಮಿಕ ಹಾಗೂ ಸಾಮಾಜಿಕ ಸಮಾಜಕ್ಕೆ ದೊಡ್ಡ ಕೊಡುಗೆಯನ್ನು ನೀಡುತ್ತಿದ್ದಾರೆ ನಮ್ಮ ಗುರುಗಳಾದ ಶ್ರೀ ಶ್ರೀ ವಿದ್ಯಾಧೀಶತೀರ್ಥಶ್ರೀಪಾದರು. ಆ ನಿಟ್ಟಿನಲ್ಲಿ ಈಗ ಕರ್ಣಪರ್ವದ ಭಾಗವನ್ನು ಅರ್ಥಸಹಿತ ಎರಡು ಸಂಪುಟಗಳಲ್ಲಿ ಲೋಕಾರ್ಪಣೆ ಮಾಡುತ್ತಿದ್ದೇವೆ. ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥಶ್ರೀಪಾದರ ಮಹತ್ಸಂಕಲ್ಪವಾದ ಶ್ರೀಮಹಾಭಾರತ ಮುದ್ರಣವು ಅವರೇ ಹುಟ್ಟುಹಾಕಿದ ತತ್ವಸಂಶೋಧನ ಸಂಸತ್ತಿನಿಂದ ಆಗಬೇಕೆಂದು ಶ್ರೀಪಾದರು ಸಂಕಲ್ಪಿಸಿದ್ದಾರೆ. . ಈ ನಮ್ಮ ಸಂಸ್ಥೆಯ ಎಲ್ಲಾ ವಿಷಯಗಳಲ್ಲಿ ತಮ್ಮ ಸಂಪೂರ್ಣ ಅನುಗ್ರಹವನ್ನು ಧಾರೆಯೆರೆದ ನಮ್ಮ ಸಂಸ್ಥೆಯ ಕುಲಪತಿಗಳಾದ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರಿಗೆ ಹೃತ್ಪೂರ್ವಕ ಅನಂತ  ನಮೋವಾಕ್ಕುಗಳನ್ನು ಸಮರ್ಪಿಸುತ್ತಿದ್ದೇನೆ.

ಕರ್ಣಪರ್ವದ ಮುದ್ರಣಕ್ಕೆ ಬೇಕಾದ ಧನವನ್ನು ನಮ್ಮವರೇ ಆದ ಶ್ರೀಯುತ ಕೆ.ಜಿ.ರಾಘವೇಂದ್ರರಾವ್ ಶ್ರೀಮತಿ ನಂದಿತಾರಾವ್ ದಂಪತಿಗಳು ನೀಡಿರುತ್ತಾರೆ. ಅಮೆರಿಕಾದ ಫ್ಲೋರಿಡಾದಲ್ಲಿ ಸಾಫ್ಟ್‌ವೇರ್ ಇಂಜಿನಿಯರ್ ಆಗಿ ಸೇವೆಸಲ್ಲಿಸುತ್ತಿರುವ ಇವರು ಮೂಲತಃ ದಕ್ಷಿಣಕನ್ನಡದವರಾಗಿದ್ದು, ನಮ್ಮ ಧರ್ಮ ಸಂಸ್ಕೃತಿಗಳ ಬಗ್ಗೆ ಅಪಾರ ಪ್ರೀತಿಉಳ್ಳವರಾಗಿದ್ದಾರೆ. ನಮ್ಮ ಪ್ರಕಾಶನಕ್ಕೆ ಉದಾರಸೇವೆಯನ್ನು ಸಲ್ಲಿಸಿದ ಇವರ ಕುಟುಂಬಕ್ಕೆ ಶ್ರೀಕೃಷ್ಣ–ಮುಖ್ಯಪ್ರಾಣರು ಸನ್ಮಂಗಲವನ್ನುಂಟು ಮಾಡಲಿ ಎಂದು ಪ್ರಾರ್ಥಿಸುತ್ತೇವೆ.

ಈ ಮಹಾಭಾರತದ ಯೋಜನೆಯಲ್ಲಿ ತೊಡಗಿರುವ ಎಲ್ಲ ವಿದ್ವಾಂಸರು, ಮುಖ್ಯವಾಗಿ ಯೋಜಕರಾಗಿರುವ, ಎಲ್ಲ ವಿದ್ವಾಂಸರನ್ನು ಸೇರಿಸಿ ಯೋಜನೆಯನ್ನು ರೂಪಿಸಿ ಅದ್ಭುತವಾದ ಕಾರ್ಯವನ್ನು ಮಾಡುತ್ತಿರುವ ನಮ್ಮ ನಾಡಿನ ಶ್ರೇಷ್ಠ ಪ್ರವಚನಕಾರರೂ, ವಿದ್ವಾಂಸರೂ ಆಗಿರುವಂತಹ ಡಾ|| ಬೆ.ನಾ. ವಿಜಯೀಂದ್ರಾಚಾರ್ಯರಿಗೆ ಹೃತ್ಪೂರ್ವಕ ನಮನಗಳನ್ನು ಸಮರ್ಪಿಸುತ್ತೇವೆ.

ಅದೇ ರೀತಿ ಅಕ್ಷರ ಜೋಡಣೆಯನ್ನು ಮಾಡಿರುವ ನಮ್ಮವರೇ ಆದ ಶ್ರೀ ಪ್ರೇಮಕುಮಾರ್‌ರವರಿಗೆ, ಈ ಗ್ರಂಥವನ್ನು ಅಂದವಾಗಿ ಹಾಗೂ ಸಮಯಕ್ಕೆ

ಸರಿಯಾಗಿ ಮುದ್ರಣ ಮಾಡಿಕೊಟ್ಟಂತಹ ಪವನ್ ಪ್ರಿಂಟರ್ಸ್‌ನ ಶ್ರೀ ಮಂಜುನಾಥ್ ರವರಿಗೂ ನಮ್ಮ ಸಂಸತ್ತಿನ ಪರವಾಗಿ ಧನ್ಯವಾದಗಳು.

ಹಾಗೆಯೇ ಈ ಕಾರ್ಯಕ್ಕೆ ಸಹಕಾರ ಮಾಡಿದ, ಮಾಡುತ್ತಿರುವ, ಇನ್ನು ಮುಂದೆ ಮಾಡುವಂತಹ ತತ್ವಸಂಶೋಧನ ಸಂಸತ್ತಿನ ಎಲ್ಲ ಪದಾಧಿಕಾರಿಗಳಿಗೂ ಹಾಗೂ ಶ್ರೀ ಪಲಿಮಾರು ಮಠದ ಎಲ್ಲ ಪದಾಧಿಕಾರಿಗಳಿಗೆ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ವಂದನೆಗಳು.

ಎಲ್ಲ ಆಸ್ತಿಕರು ಈ ಗ್ರಂಥದ ಅಧ್ಯಯನ ಮಾಡಿದರೆ, ಇಷ್ಟು ವಿದ್ವಾಂಸರ ಶ್ರಮ, ಶ್ರೀಗಳವರ ಸಂಕಲ್ಪ ಸಾರ್ಥಕ. ಭಾರತದಲ್ಲಿ ಹುಟ್ಟಿದ್ದಕ್ಕೆ ಮಹಾಭಾರತದ ಚಿಂತನೆ ಯನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ಉದ್ಧೃತರಾಗೋಣ ಎಂದು ಆಶಿಸುತ್ತೇನೆ.

**ಡಾ|| ವಂಶೀಕೃಷ್ಣಾಚಾರ್ಯ ಪುರೋಹಿತ್**
ನಿರ್ದೇಶಕರು, ತತ್ವಸಂಶೋಧನಸಂಸತ್
ಶ್ರೀ ಪಲಿಮಾರು ಹೃಷೀಕೇಶ ಮಠ, ಉಡುಪಿ

# ಕರ್ಣಪರ್ವವನ್ನು ಓದುವ ಮುನ್ನ...

ಕಬ್ಬಿನ ಕೋಲಿನಂತೆ ಭಾರತ 'ಪ್ರತಿ ಪರ್ವ ರಸಾಯನ' ಪ್ರತಿಯೊಂದು ಪರ್ವದಲ್ಲಿ ರಸ ಜಿನುಗುತ್ತದೆ. ಕರ್ಣಪರ್ವವೂ ಹಾಗೇ ಅದ್ಭುತರಸಮಯ.

ಕರ್ಣನ ವ್ಯಕ್ತಿತ್ವವೇ ಅದ್ಭುತ! 'ಸೂತಪುತ್ರ'ನಾಗಿಯೂ ಅಂಗದೇಶದ ಪಟ್ಟಾಭಿಷಿಕ್ತ ದೊರೆ ಎನಿಸಿದ್ದು ಅದ್ಭುತ. ಸೂತಪುತ್ರನಾಗಿದ್ದೂ ಜಗದೊಡೆಯ ಸರ್ವಜ್ಞ ನಾರಾಯಣಾವತಾರ ಪರಶುರಾಮರಲ್ಲಿ ಸಕಲ ವೇದವಿದ್ಯೆಗಳನ್ನು ಗಳಿಸಿ, ಅರ್ಜುನನಿಗಿಂತಲೂ ಹೆಚ್ಚಿನ ಅಸ್ತ್ರಕೌಶಲವನ್ನು ಪ್ರದರ್ಶಿಸಿದ್ದು ಅತ್ಯದ್ಭುತ. ಶ್ರದ್ಧೆಯಿಂದ ಸಂಧ್ಯಾವಂದನೆ ಸೂರ್ಯೋಪಾಸನೆ ದಾನಧರ್ಮಗಳನ್ನು ಆಚರಿಸುವ ಪರಮಧಾರ್ಮಿಕನಾಗಿದ್ದೂ ಪರಮಧಾರ್ಮಿಕರಾದ ಪಾಂಡವರಲ್ಲಿ ಪರಮನೀಚನಾದ ದುರ್ಯೋಧನ ನಿಂದಲೂ ಮಾಡಲಾಗದಷ್ಟು ಕೆಟ್ಟ ದ್ವೇಷ ಸಾಧನೆಯನ್ನು ಕರ್ಣಮಾಡಿದ್ದೂ ಪರಮಾದ್ಭುತ.

**'ತ್ವತ್ಸಮಂ ತ್ವದ್ವಿಶಿಷ್ಟಂ ವಾ ಕರ್ಣಂ ಮನ್ಯೇ ಮಹಾರಥಂ'**
**'ಅವಶ್ಯಂ ತು ಮಯಾ ವಾಚ್ಯಂ ಯತ್ ಪಥ್ಯಂ ತವ ಪಾಂಡವ**
**ಮಾವಮಂಸ್ಥಾ ಮಹಾಬಾಹೋ ಕರ್ಣಮಾಹವಶೋಭಿನಂ'**

ಎಂದು ಶ್ರೀಕೃಷ್ಣ ಅರ್ಜುನನಿಗೆ ಕಿವಿಮಾತು ಹೇಳಿದ್ದುಂಟು (ಕರ್ಣಪರ್ವ ೬೯.೨೭,೨೫) 'ಮಹಾರಥನಾದ ಕರ್ಣ ನಿನಗೆ ಸರಿ ಅಥವಾ ಮಿಗಿಲೇ ಎನ್ನಬಹುದು. ಅವನನ್ನು ಅರ್ಜುನ, ನೀನು ಅವಮಾನಿಸಬೇಡ ಇದು ನಿನಗೆ ನಾನು ಅವಶ್ಯ ಹೇಳಬೇಕಾದ ಹಿತವಚನ' ಎನ್ನುತ್ತಾನೆ ಶ್ರೀಕೃಷ್ಣ. ಸೂತಪುತ್ರನಾಗಿ ಕರ್ಣ ಇಷ್ಟು ದೊಡ್ಡ ಸಾಧನೆ ಮಾಡಿದ್ದು ಅದ್ಭುತವಲ್ಲದೆ ಇನ್ನೇನು?

ಕರ್ಣನಿಗೆ ಬ್ರಾಹ್ಮಣರೆಂದರೆ ಪರಮಭಕ್ತಿ. ಬ್ರಾಹ್ಮಣ ವೇಷದಿಂದ ಇಂದ್ರ ಬಂದು, ಕರ್ಣನಿಗೆ ಹುಟ್ಟಿನಲ್ಲೇ ಅಂಟಿಕೊಂಡು ಬಂದಿದ್ದ ಕವಚವನ್ನು ಕತ್ತರಿಸಿ ಕೊಡೆಂದು ಕೇಳಿದಾಗ, ಹಿಂದಿನ ರಾತ್ರಿ ಸ್ವಪ್ನದಲ್ಲಿ ಬಂದು ಪಿತನಾದ ಸೂರ್ಯನು ಇಂದ್ರನ ಬಗ್ಗೆ ಎಚ್ಚರಿಸಿದ್ದರೂ ಕೂಡ, ತನ್ನ ಪ್ರಾಣವೇ ಹೋಗುವ ಪರಿಸ್ಥಿತಿ, ಪ್ರಾಣಪ್ರಿಯನಾದ ದುರ್ಯೋಧನನಿಗೆ ಧೈರ್ಯವೇ ಉಡುಗಿ ಹೋಗುವ ಪರಿಸ್ಥಿತಿಗಳಿದ್ದರೂ ಕೂಡ, ಕತ್ತಿಯನ್ನೆತ್ತಿಕೊಂಡು ಕರ್ಣ ಜೀವಂತನಾಗಿ ನಿಂತು

ಮೈಯಿಂದ ಆ ಕವಚವನ್ನು ಕರಕರನೆ ಕತ್ತರಿಸಿ ಕೊಟ್ಟುಬಿಟ್ಟ, ದಾನಶೂರನಾದ ಶಿಬಿ ಚಕ್ರವರ್ತಿಯಂತೆ! ಈ ಸಾಹಸವನ್ನು ಬ್ರಾಹ್ಮಣಭಕ್ತಿಯನ್ನು ದಾನನಿಷ್ಠೆಯನ್ನು ತ್ಯಾಗಬುದ್ಧಿಯನ್ನು ಕಂಡು ದೇವತೆಗಳು ಪುಷ್ಪವೃಷ್ಟಿಗರೆದರು! ಅದ್ಭುತ !

ಎಲ್ಲ ಬಣ್ಣ ಮಸಿ ನುಂಗಿತೆಂಬಂತೆ, ಕರ್ಣ ವಿನಾಕಾರಣ ಸಜ್ಜನರಾದ ಧಾರ್ಮಿಕರಾದ ಪಾಂಡವರಲ್ಲಿ ದ್ವೇಷ ಮಾಡಿದ. ಕೊನೆಯುಸಿರಿನ ತನಕವೂ ಅದನ್ನು ಸಾಧಿಸಿದ. ಅದರಿಂದ ಧರ್ಮಶ್ರದ್ಧೆ ಅವನಿಗಿರಲಿಲ್ಲ. ಕೇವಲ ಸ್ವಾರ್ಥಪೂರಿತವಾದ ಕಪಟವರ್ತನೆ ಇದು. ಇಲ್ಲದಿದ್ದರೆ 'ತುಂಬಿದ ಸಭೆಯಲ್ಲಿ ಪತಿವ್ರತಾಶಿರೋಮಣಿದೇವಿ ದ್ರೌಪದಿ ಬೆತ್ತಲೆ ನಿಂತು ಪತಿಗಳೆದುರೇ ಒದ್ದಾಡಲಿ, ಈ ಸಂಕಟವನ್ನು ಕಂಡು ನಾವು ನಲಿಯೋಣ' ಎನ್ನುವ ಕೀಳುಮನೋವೃತ್ತಿಯನ್ನು ಕರ್ಣನಲ್ಲಿ ನಿರೀಕ್ಷಿಸಲು ಸಾಧ್ಯವೆ?

ಮೇಲುನೋಟಕ್ಕೆ ಇಂಥ ಪ್ರಶ್ನೆ ಬರುವುದು ಸಹಜ. ಆದರೆ ವಾಸ್ತವ ಸಂಗತಿ ಬೇರೇ ಇದೆ. ಕರ್ಣನ ಧರ್ಮಾಚರಣೆಯೂ ತೋರಿಕೆಯದಲ್ಲ. ಅವನು ಮಾಡಿದ ಪಾಂಡವ ದ್ವೇಷವೂ ನಟನೆಯಲ್ಲ. ಎರಡೂ ನಿಜವೇ. ಕೇವಲ ಅಸುರಾವೇಶ ಪ್ರಭಾವದಿಂದ ಇದು ಸಾಧ್ಯವಾಯಿತು. ಆದ್ದರಿಂದ ಇದು ಅದ್ಭುತ!

**ಯದಬ್ರುವಮಹಂ ಕೃಷ್ಣ ಕಟುಕಾನಿ ಸ್ಮ ಪಾಂಡವಾನ್ ।**
**ಪ್ರಿಯಾರ್ಥಂ ಧಾರ್ತರಾಷ್ಟ್ರಸ್ಯ ತೇನ ತಪ್ಯೇ ಹ್ಯಕರ್ಮಣಾ ॥**

ದುರ್ಯೋಧನನ ಪ್ರೀತಿಗಾಗಿ ದ್ರೌಪದಿಗೆ ತಾನು ಕೆಟ್ಟಮಾತನ್ನಾಡಿದ್ದನ್ನು ತಪ್ಪೆಂದು ಒಪ್ಪಿಕೊಳ್ಳುತ್ತಾನೆ. ಅದಕ್ಕೆ ಪಶ್ಚಾತ್ತಾಪ ಪಡುತ್ತಿದ್ದೇನೆ ಎಂದು ಕೃಷ್ಣನ ಮುಂದೆ ಏಕಾಂತದಲ್ಲಿ ಹೇಳಿಕೊಳ್ಳುತ್ತಾನೆ, ಕರ್ಣ.

'ನೀನು ಪಾಂಡವ ಪಕ್ಷಕ್ಕೆ ಬರುವುದಾದರೆ ರಾಜಸಿಂಹಾಸನ ನಿನ್ನದಾಗುತ್ತದೆ' ಎಂದು ಕೃಷ್ಣ ಹೇಳಿದಾಗ ಕರ್ಣನಲ್ಲಿ ಸ್ವಾರ್ಥಬುದ್ಧಿ ಇರುತ್ತಿದ್ದರೆ ಒಡನೆ ಸ್ವೀಕರಿಸುತ್ತಿದ್ದ. ಅದಕ್ಕೆ ದುರ್ಯೋಧನನೂ ಸಂತೋಷಪಡುತ್ತಿದ್ದ. ಮೋಸದ ಜೂಜಿನಿಂದ ರಾಜ್ಯ ಕಸಿದುಕೊಂಡವನು ಆತ. ಕರ್ಣನೂ ಒಂದುವೇಳೆ ಪಾಂಡವ ನಲ್ಲದಿದ್ದರೂ ಪಾಂಡವನೆಂದು ಹೇಳಿಕೊಂಡು ಸಿಂಹಾಸನವನ್ನು ಕಸಿದುಕೊಂಡಿದ್ದರೆ ಅದನ್ನು ತಪ್ಪೆನ್ನುತ್ತಿರಲಿಲ್ಲ. ಭೇಷ್ ಎನ್ನುತ್ತಿದ್ದ. ಹಾಗೆ ಕರ್ಣ ಕಸಿದುಕೊಂಡು ದುರ್ಯೋಧನನಿಗೇ ಕೊಟ್ಟಿದ್ದರೆ, ಇನ್ನೂ ಹೆಚ್ಚು ಭೇಷ್ ಎನ್ನುತ್ತಿದ್ದ. ಆದರೆ ಕರ್ಣ

ಅನಾಯಾಸ ಸಿಗುತ್ತಿದ್ದ ರಾಜ್ಯ ತ್ಯಾಗ ಮಾಡಿದ. ಏಕೆಂದರೆ 'ದುರ್ಯೋಧನ ದುಃಶಾಸನರು ಪೂರ್ಣ ನಾಶವಾಗಬೇಕು, ಧರ್ಮರಾಜನೇ ರಾಜ್ಯವಾಳಬೇಕು' ಎಂದು ಸದಾ ಕನಸು ಕಾಣುತ್ತಿದ್ದವನು ಕರ್ಣ. ಹಾಗೇ ಕೃಷ್ಣನ ಮುಂದೆ ತನ್ನ ಅಂತರಂಗವನ್ನು ತೋಡಿಕೊಳ್ಳುತ್ತಾನೆ. ಕೃಷ್ಣನಿಗೆ, ತಾನು ಪಾಂಡವರಿಗೆ ಹಿರಿಯಣ್ಣನೆನ್ನುವ ಸತ್ಯವನ್ನು ಅವರಿಗೆ ಹೇಳಬೇಡ, ಹೇಳಿದರೆ ಧರ್ಮರಾಜ ರಾಜನಾಗಲು ಒಪ್ಪಲಾರ ಎನ್ನುತ್ತಾನೆ!

ಕುರುಕ್ಷೇತ್ರದ ಶಸ್ತ್ರಯಜ್ಞದಲ್ಲಿ ದುರ್ಯೋಧನ ಮತ್ತು ಅವನ ಸೈನ್ಯಪೂರ್ತಿ ಆಹುತಿಯಾಗಬೇಕು. ಭೀಮನು ದುಃಶಾಸನನ ಎದೆಬಗಿದು ರಕ್ತಪಾನ ಮಾಡಬೇಕು. ಆಮೂಲಕ ರಣರಂಗದಲ್ಲಿ ಸಾಮಗಾನಪೂರ್ವಕ ಸೋಮಯಾಗ ವನ್ನು ನೆರವೇರಿಸಬೇಕು. ಮುಂದೆ ದುರ್ಯೋಧನನ ವಧದಿಂದ ಸವನೀಯ ಪಶುಯಾಗವನ್ನೂ ಅವನೇ ಮಾಡಬೇಕು, ಎನ್ನುತ್ತ ತಾನು ಈ ಯಜ್ಞದಲ್ಲಿ ಪಶುವಾಗಿ ಆತ್ಮಾಹುತಿ ಮಾಡಿಕೊಂಡು ಸ್ವರ್ಗ ಪಡೆಯಬೇಕು ಎಂದೂ ಉದ್ಯೋಗ ಪರ್ವದಲ್ಲಿ ಕರ್ಣ ತನ್ನ ಹಾರ್ದವನ್ನು ಕೃಷ್ಣನ ಮುಂದೆ ಹೇಳಿಕೊಂಡಿದ್ದಾನೆ ಕರ್ಣ. ಐದೂ ಜನ ಪಾಂಡವರು ಉಳಿಯಬೇಕು. ಈ ಯಜ್ಞದಲ್ಲಿ ಋತ್ವಿಜರಾಗಿ ರಾಜ್ಯಭೋಗ ಮಾಡಬೇಕೆಂದೂ ಹೇಳಿದ್ದಾನೆ.

ಈ ಯುದ್ಧಯಜ್ಞ ಸಂಭವಿಸಬೇಕೆನ್ನುವ ಉದ್ದೇಶದಿಂದಲೆ ಪಾಂಡವದ್ವೇಷದ ಕಿಚ್ಚನ್ನು ಚೆನ್ನಾಗಿ ದುರ್ಯೋಧನನ ಹೊಟ್ಟೆಯಲ್ಲಿ ಉರಿಸಿದ್ದಾನೆ ಕರ್ಣ.

**ಕ್ಷತ್ರಂ ಸ್ವರ್ಗಂ ಕಥಂ ಗಚ್ಛೇತ್ ಶಸ್ತ್ರಪೂತಮಿತಿ ಪ್ರಭೋ ।**
**ಸಂಘರ್ಷ ಜನನಸ್ತಸ್ಮಾತ್ ಕನ್ಯಾಗರ್ಭೋ ವಿನಿರ್ಮಿತಃ ॥**

ಪಾಂಡವರ ಕೌರವರೊಳಗೆ ಸಂಘರ್ಷ ಉಂಟಾಗುವಂತೆ ಮಾಡಿ ಯುದ್ಧ ಯಜ್ಞದಲ್ಲಿ ಕರ್ಣ ತಾನು ಶಸ್ತ್ರದಿಂದ ಪವಿತ್ರನಾಗಿ ಸ್ವರ್ಗಭಾಗಿಯಾಗಲೆಂದೇ ವಿಧಿ ಅವನನ್ನು ಕನ್ಯೆಯಾಗಿದ್ದ ಕುಂತಿದೇವಿಯ ಗರ್ಭದಲ್ಲಿ ಅವತರಿಸುವಂತೆ ಮಾಡಿತ್ತೆಂದು ನಾರದರು ಧರ್ಮರಾಜನಿಗೆ ಹೇಳುತ್ತಾರೆ.

ಪಾಂಡವ ದ್ವೇಷ ಸಾಧನೆಯ ಕಾರ್ಯದಲ್ಲಿ ಕರ್ಣ ದುರ್ಯೋಧನನಿಗೆ ಹೆಗಲೆಣೆ ಯಾಗಿರಲಿ ಎಂಬ ಉದ್ದೇಶದಿಂದಲೇ ಪರಶುರಾಮರು ಕರ್ಣನಿಗೆ ಅಸ್ತ್ರವಿದ್ಯೆಯನ್ನು ಉಪದೇಶಿಸಿದ್ದರು. ಇಲ್ಲದಿದ್ದರೆ ತಾನು ಬ್ರಾಹ್ಮಣನೆಂದು ಕರ್ಣ

ಸುಳ್ಳು ಹೇಳಿದರೆ ಸರ್ವಜ್ಞರಾದ ಪರಶುರಾಮರಿಗೆ ಅದು ತಿಳಿಯದಿದ್ದೀತೆ? ಹೀಗಾಗಿ ಕರ್ಣ ದುರ್ಯೋಧನನಿಗೆ ಪ್ರಾಣಸ್ನೇಹಿತನಾಗಿ ಜೊತೆಗಿದ್ದು ಅವನಿಗೆ ಎಲ್ಲ ಪಾಪಕೃತ್ಯಗಳಲ್ಲಿ ಹುರಿದುಂಬಿಸುತ್ತ ಮಾರ್ಗದರ್ಶಕನಾಗಿ ವರ್ತಿಸಿದ. ಅವನು ಹೀಗೆ ಮಾಡದಿರುತ್ತಿದ್ದರೆ ಭಾರತ ಯುದ್ಧವೇ ನಡೆದಿರುತ್ತಿರಲಿಲ್ಲ!

ದುರ್ಯೋಧನನಿಗೆ ಒಂದಿಷ್ಟೂ ಅನುಮಾನ ಬಾರದಂತೆ ಅದ್ಭುತ ರೀತಿಯಲ್ಲಿ ವರ್ತಿಸಿ ಕರ್ಣ ತನ್ನ ಜನ್ಮಸಾಫಲ್ಯವನ್ನು ತಾನೇ ಸಾಧಿಸಿಕೊಂಡ. ಇದು ಅತ್ಯದ್ಭುತ. ಅದಕ್ಕೇ ಕರ್ಣನ ಶಿರ ಧರೆಗೆ ಉರುಳಿದಾಗ ಅಂತರಿಕ್ಷದಲ್ಲಿ ದೇವತೆಗಳು ಹಾಹಾಕಾರ ಮಾಡಿದರು (ಕರ್ಣ.೯೩.೫೧). ಧನ್ಯವಾಯಿತು ಕರ್ಣನ ಅವತಾರ ಎನ್ನಲು ಬೇರೇನು ಸಾಕ್ಷಿಬೇಕು? ಇದು ಅತ್ಯಂತ ಅದ್ಭುತ! 'ಅತಃ ಪರಂ ಕರ್ಣಪರ್ವ ಪ್ರೋಚ್ಯತೇ ಪರಮಾದ್ಭುತಂ!' ಎಂದು ಪರ್ವಸಂಗ್ರಹಪರ್ವದಲ್ಲಿ ಕರ್ಣಪರ್ವ ವನ್ನು 'ಪರಮಾದ್ಭುತ' ಎಂದೇ ಪ್ರಶಂಸೆ ಮಾಡಲಾಗಿದೆ.

## ಗ್ರಂಥಸಂಪಾದನೆಯ ಬಗ್ಗೆ ಎರಡು ಮಾತು

ಭಾರತ ಪ್ರಚಲಿತ ಪಾಠದಲ್ಲಿ ಅಡಿಗಡಿಗೆ ಬಿಡಿಸಲಾಗದ ಸಮಸ್ಯೆಗಳು ಇದಿರಾಗುತ್ತವೆ. ಪೂರ್ವೋತ್ತರ ವಿರೋಧಗಳೂ ಕಂಡುಬರುತ್ತವೆ. ಮೂಲಪಾಠ ವನ್ನು ಸಂಶೋಧನೆಯಿಂದ ಕಂಡುಕೊಳ್ಳೋಣವೆಂದರೆ ಅದು ಆಗದ ಮಾತು. ಗಣೇಶ ಬರೆದಿದ್ದ ಮೂಲಪ್ರತಿ ನಮಗೆ ಸಿಗುವುದೂ ಅಸಂಭವ. ಅದಕ್ಕೆ ಮೂಲಪಾಠಕ್ಕೆ ಸಾಕಷ್ಟು ಹತ್ತಿರವಾಗಬಲ್ಲ ಪಾಠವನ್ನು ಸಂಪಾದಿಸಬೇಕಾಗುತ್ತದೆ. ಲಕ್ಷಾಲಂಕಾರವನ್ನು ಬರೆದ ಶ್ರೀವಾದಿರಾಜ ಗುರುಸಾರ್ವಭೌಮರು ಕೂಡ ಮೂಲಪಾಠವೆಂದು ಒಂದು ಪಾಠವನ್ನು ಎಲ್ಲಿಯೂ ತೋರಿಸಿಲ್ಲ. 'ಇತಿ ಪಾಠೇ'. 'ಇತಿ ಪಾಠೇ' ಈ ಪಾಠದಲ್ಲಿ ಹೀಗೆ ಅರ್ಥ. ಈ ಪಾಠದಲ್ಲಿ ಹೀಗೆ ಅರ್ಥ ಎನ್ನುತ್ತ ಅನೇಕ ಪಾಠಗಳನ್ನೇ ಸ್ವೀಕರಿಸಲು ಅನುಮತಿ ನೀಡಿದ್ದಾರೆ.

ಉದಾ: ಕರ್ಣನ ಧ್ವಜ 'ಹಸ್ತಿಕಕ್ಷ್ಯಾ' ಎಂದೇ ಎಲ್ಲ ಹಸ್ತಪ್ರತಿಗಳಲ್ಲಿ ಕಾಣುತ್ತದೆ. ಒಂದುಕಡೆ ಮಾತ್ರ 'ಹಸ್ತಕಾಕ್ಯಾ' ಎಂದು ಪಾಠ—

**ಕರ್ಣಸ್ಯಾಶೀವಿಷನಿಭಾ ರತ್ನಸಾರವತೀ ದೃಢಾ ।**<br>**ಪುರಂದರ ಧನುಃಪ್ರಖ್ಯಾ ಹಸ್ತಕಾಕ್ಯಾ ವ್ಯರಾಜತ ॥**<br>**ಕಪಿಶ್ರೇಷ್ಠಸ್ತು ಪಾರ್ಥಸ್ಯ ವ್ಯಾದಿತಾಸ್ಯೋ ಭಯಂಕರಃ ।**

**ಉತ್ಪತ್ಯತು ಮಹಾವೇಗಃ ಕಾಕಮಭ್ಯಾಹನತ್ ಕಪಿಃ ।**
**ನಖೈಶ್ಚ ದಶನೈಶ್ಚೈವ ಗರುಡಃ ಪನ್ನಗಂ ಯಥಾ**
**ಸಾ ಕಿಂಕಿಣೀ ಕಾಭರಣಾ ಕಾಲಪಾಶೋಪಮಾಽಽಯಸೀ**
**ಅಭ್ಯದ್ರವತ್ ಸುಸಂಕ್ರುದ್ಧಾ ಹಸ್ತಕಾಕ್ಯಾಥ ತಂ ಕಪಿಂ ।।** (ಕರ್ಣ.೮೩.೭೯-೮೩)

ಈ ಪಾಠ ಪುಣೆಯ ಭಂಡಾರ್ಕರ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನವರಿಗೆ ಸಿಕ್ಕಿಲ್ಲ, ಒಂದುವೇಳೆ ಸಿಕ್ಕಿದ್ದರೂ 'ಒಂದೇ ಹಸ್ತಪ್ರತಿ, ನಂಬಲರ್ಹವಲ್ಲ' ಎಂದು ಕೈಬಿಡುತ್ತಿದ್ದರು. ಆಧುನಿಕ ಪಾಠ ಸಂಶೋಧನೆಯ ವೈಖರಿಯೆ ಹೀಗೆ. ಅವರಿಗೆ ೩೨ ಹಸ್ತಪ್ರತಿಗಳು ಸಿಕ್ಕಿದ್ದರೂ ೨೭ ಪ್ರತಿಗಳನ್ನು ಮಾತ್ರ ಉಪಯೋಗಿಸಿಕೊಂಡಿದ್ದೇವೆ ಎಂದಿದ್ದಾರೆ. ಆದರಿಂದ ಇಲ್ಲಿ ನಾವು ಈ ಸಂಪುಟದಲ್ಲಿ ಲಕ್ಷಾಲಂಕಾರಕ್ಕೆ ಸಮ್ಮತವಾದ ಪಾಠವನ್ನೇ ಸಂಯೋಜನೆ ಮಾಡಿದ್ದೇವೆ.

ಉದಾ: ಕರ್ಣನ ಧ್ವಜ ಯಾವುದು ಎಂದರೆ 'ಹಸ್ತಿಕಕ್ಷ್ಯಾ' ಆನೆಯ ನಡುಕಟ್ಟು, ನಡುವಿಗೆ ಬಿಗಿಯುವ ತೊಗಲಿನ ಹಗ್ಗ ಎಂದು ಪ್ರಸಿದ್ಧ. ವಸ್ತುತಃ ಹಸ್ತಪ್ರಮಾಣದ ಕಬ್ಬಿಣದ ಕಾಗೆಯ ಪ್ರತಿಮೆ 'ಹಸ್ತಕಾಕ್ಯಾ' ಕರ್ಣನ ಧ್ವಜವೆಂದು ಮೇಲಿನ ಪಾಠದಿಂದ ವ್ಯಕ್ತವಾಗುತ್ತದೆ. 'ಹಸ್ತಿಕಕ್ಷ್ಯಾ' ಎಂಬ ಹೆಸರೂ ಅದಕ್ಕೇ ಸಲ್ಲುತ್ತದೆ ಎನ್ನುತ್ತಾರೆ ವಾದಿರಾಜರು. ಏಕೆಂದರೆ ಕಕ್ಷ ಎಂದರೆ ಕಾಡು. ಕಾಡುಕಾಗೆ 'ಕಕ್ಷ್ಯ' ಎನಿಸುತ್ತದೆ. ಅದರ ಪ್ರತಿಮೆ, 'ಕಕ್ಷ್ಯಾ'. ಹಸ್ತಪ್ರಮಾಣದ್ದಾದ್ದರಿಂದ ಅದು 'ಹಸ್ತಿಕಕ್ಷ್ಯಾ' ಎನಿಸಿದೆ. 'ಕಕ್ಷ್ಯ' ಎಂದು ಕಾಗೆಗೆ ಹೆಸರು ಕೋಶಗಳಲ್ಲಿ ಕಾಣದಿದ್ದರೂ ಗುಹ್ಯಭಾಷಾಪ್ರಿಯರಾದ ವ್ಯಾಸರು ಕ್ಲಿಷ್ಟವಾದ ಕೂಟ ಶ್ಲೋಕಗಳಂತೆ ಈರೀತಿಯ ಕ್ಲಿಷ್ಟಪದಗಳನ್ನು ಬಳಸಿರುವ ಸಂಭವವನ್ನೂ ಕ್ಲಿಷ್ಟ ಎನ್ನುವ ಕಾರಣಕ್ಕೇ ತಳ್ಳಿ ಹಾಕುವಂತಿಲ್ಲ ಎನ್ನುತ್ತಾರೆ ವಾದಿರಾಜರು.

ಕಾಕಧ್ವಜವು ಕಾಗೆಯ ಪ್ರತಿಮೆಯೇ ಆಗಿರಬೇಕೆ? 'ಧ್ವಜ' ಎಂದರೆ ಪತಾಕೆ, ಬಾವುಟ, ಬಟ್ಟೆಯ ತುಂಡು. ಗಾಳಿಗೆ ಫರಫರನೆ ಹಾರಾಡುತ್ತಿರುತ್ತದೆ ಎಂದು ಎಲ್ಲ ಕೋಶಕಾರರೂ ಅಭಿಪ್ರಾಯಪಡುತ್ತಾರೆ. ಆದರೆ ವಸ್ತುತಃ ಧ್ವಜವು ಪತಾಕೆಯಲ್ಲ, ಪತಾಕೆ ಧ್ವಜವಲ್ಲ. ಧ್ವಜವು ಪ್ರತಿಮೆಯಾಗಿರುತ್ತದೆ. ಪತಾಕೆ ಮಾತ್ರ ಬಟ್ಟೆಯ ತುಂಡು.

**ಹೇಮರೂಪ್ಯ ಪ್ರಮೃಷ್ಟಾನಾಂ ವಾಸಸಾಂ ಶಿಲ್ಪಿನಿರ್ಮಿತಾಃ ।**
**ಸಹೇಮ ಚಂದ್ರ ತಾರಾರ್ಕಾಃ ಪತಾಕಾಃ ಕಿಂಕಿಣೀಯುತಾಃ ।।** (೪೪.೫೫)

ಇಲ್ಲಿ 'ಶಿಲ್ಪಿ'ಗಳೆಂದರೆ 'ಬಟ್ಟೆಗೆ ಬಣ್ಣ ಹಾಕುವವರು' ಎಂದು ನೀಲಕಂಠೀ ವ್ಯಾಖ್ಯಾನ ಹೇಳುತ್ತದೆ. ಆದರೆ 'ಕೇತು' 'ಧ್ವಜ'ಗಳೆಂದರೆ ಬಟ್ಟೆ ತುಂಡಲ್ಲ.

**ಸೌವರ್ಣಾ ರಾಜತಾಶ್ಚೈವ ತೈಜಸಾಶ್ಚ ಪೃಥಗ್ವಿಧಾಃ ।**
**ಕೇತವೋ ವಿನಿಪಾತ್ಯಂತೇ ।** (೫೭.೬೪)

'ಚಿನ್ನ ಬೆಳ್ಳಿ ಮುಂತಾದ ಲೋಹಗಳಿಂದಾದ ನಾನಾ ಬಗೆಯ ಧ್ವಜ'ಗಳ ವರ್ಣನೆ ಕಾಣುತ್ತದೆ.

**'ತತೋ ಧ್ವಜಂ ಸ್ಫಾಟಿಕ ಚಿತ್ರಕಂಬುಂ'** (೮೧.೨೧)

ವೃಷಸೇನನ ಧ್ವಜವು ಸ್ಫಟಿಕಮಯವಾದ ಶಂಖಪ್ರತಿಮೆ ಎನ್ನಲಾಗಿದೆ.

**ಸಾ ಕಿಂಕಿಣಿಕಾಭರಣಾ ಕಾಲಪಾಶೋಪಮಾಯಸೀ ।**
**ಅಭ್ಯದ್ರವತ್ ಸುಸಂಕ್ರುದ್ಧಾ ಹಸ್ತಕಾಕ್ಯಾಥ ತಂ ಕಪಿಂ ॥**(೮೩.೮೩)

ಇಲ್ಲಿ ಯಮಪಾಶದಂತೆ ಕಪ್ಪಾದ ಭೀಕರವಾದ ಕಬ್ಬಿಣದ ಕಾಕಧ್ವಜದ ಉಲ್ಲೇಖವಿದೆ. ಯಮಪಾಶ ದೃಷ್ಟಾಂತ ಮಾತ್ರದಿಂದ ಅದನ್ನು ಹಗ್ಗ ಎನ್ನಲಾಗದು.

**ತತಃ ಶ್ವೇತ ಪತಾಕೇನ ಬಲಾಕಾವರ್ಣವಾಜಿನಾ ।**
**ಹೇಮಪೃಷ್ಠೇನ ಧನುಷಾ ಹಸ್ತಿಕಕ್ಷ್ಯೇಣ ಕೇತುನಾ ॥** (೧೧.೮)

ಕೇತು ಪತಾಕೆಗಳು ಒಂದೇ ಎನ್ನುವುದಾದರೆ ಇಲ್ಲಿ ಕರ್ಣನ ರಥದಲ್ಲಿ ಬಿಳಿ ಪತಾಕೆ ಮತ್ತು ಹಸ್ತಿಕಕ್ಷ್ಯ ಕೇತುಗಳನ್ನು ಬೇರೆಬೇರೆಯಾಗಿ ಜೊತೆಗೇ ಹೇಳುವುದು ಕೂಡಲಾರದು.

ಪತಾಕೆ ಬಟ್ಟೆಯ ತುಂಡಾಗಿರುವುದರಿಂದಲೇ ರಥಿಕನಿಗೆ ಇದಿರಾಗಿ ಗಾಳಿ ಬೀಸುವಾಗ ಪತಾಕೆ ಅವನಿಗೆ ಅಭಿಮುಖವಾಗಿ ಹಾರಾಡಿ ಅಶುಭ ಸೂಚಕ ವಾಗುತ್ತದೆ.

**ರಥೇನಾಭಿಪತಾಕೇನ ಸೂತಪುತ್ರೋ ವ್ಯದೃಶ್ಯತ ॥** (೧೧.೧೦)

'ಕರ್ಣನಿಗೆ ಎದುರಾಗಿ ಅವನ ಪತಾಕೆ ಹಾರಾಡುತ್ತಿತ್ತು' ಇದು ಪರಾಜಯ ಸೂಚಕವೆಂದು ನೀಲಕಂಠೀವ್ಯಾಖ್ಯಾನದಲ್ಲಿ ಹೇಳಿದೆ.

ಯುದ್ಧ ಪ್ರಾರಂಭದಲ್ಲಿ ಮೊದಲಿಗೆ ಧ್ವಜಗಳು ಅಂದರೆ ಅವುಗಳ

ಅಭಿಮಾನಿಗಳು ಪರಸ್ಪರ ಹೋರಾಡುವುದರ ವರ್ಣನೆ ಬರುತ್ತದೆ. ಕರ್ಣಾರ್ಜುನ ರಥಗಳು ಎದುರಿಗೆ ಬಂದು ನಿಂತಾಗ ಕಪಿ ಕಾಕಗಳ ಹೋರಾಟ ನಡೆಯಿತು. ಬಳಿಕ ಅಶ್ವಗಳು ಕೆನೆಯುತ್ತ ಸ್ಪರ್ಧಿಸಿದುವು. ಸಾರಥಿಗಳು ಹಾಗೂ ರಥಿಕರು ದೃಷ್ಟಿಯುದ್ಧ ಮಾಡಿದರೆಂದಿದೆ. ಪತಾಕೆಗಳು ಈ ರೀತಿ ಸ್ಪರ್ಧಿಸುವುದು ಎಲ್ಲಿಯೂ ಕಂಡಿಲ್ಲ. ಅದರಿಂದ ಧ್ವಜ ಬೇರೆ ಪತಾಕೆ ಬೇರೆ.

ಇಲ್ಲಿ ಹೀಗೆ ಒಂದು ಹಸ್ತಪ್ರತಿಯಲ್ಲಿ ಮಾತ್ರ, ಅದರಲ್ಲಿಯೂ ಒಂದೇಕಡೆ ಸಿಕ್ಕಿದ 'ಹಸ್ತಕಾಕ್ಯಾ' ಎಂಬ ಪಾಠವನ್ನು ಯುಕ್ತವಾಗಿದೆ ಎಂಬ ಕಾರಣಕ್ಕೆ ವಾದಿರಾಜರು ಸ್ವೀಕರಿಸಿದ್ದು ಕಂಡಿದೆ.



ಯುಕ್ತವಾದ ಪಾಠಾಂತರವನ್ನು ಸ್ವೀಕರಿಸುವ ಸ್ವಾತಂತ್ರ್ಯ ಪಾಠಸಂಶೋಧಕನಿಗೆ ಇದ್ದರೆ ಮಾತ್ರ ಗ್ರಂಥ ಉಳಿಯುತ್ತದೆ. ಇಲ್ಲದಿದ್ದರೆ ಗ್ರಂಥ ಅಧ್ಯಯನ ಪರಂಪರೆಯಲ್ಲಿ ಬಾರದೆ ಲುಪ್ತವಾಗಿ ಹೋದೀತು.

ಕರ್ಣಪರ್ವದಲ್ಲಿ ಸರ್ಪಾಸ್ತ್ರ ಗುರಿತಪ್ಪುವ ಪ್ರಸಂಗದ ಒಂದು ಕೂಟ ಶ್ಲೋಕ (೮೭.೩೮) ಬಲು ಕ್ಲಿಷ್ಟವಾಗಿತ್ತು. ವ್ಯಾಖ್ಯಾನಕಾರರು ಅದಕ್ಕೆ ನೀಡಿದ ವಿವರಣೆ ಹೃದ್ಯವಾಗಿರಲಿಲ್ಲ. ಪಾಠಾಂತರಗಳ ಸಂಯೋಜನೆಯಿಂದ ಸರಳ ಸುಂದರ ವಿವರಣೆ ಇದೀಗ ಸಾಧ್ಯವಾಗಿದೆ.



ಹೀಗೆ ಪಾಠಾಂತರಗಳ ಸಹಾಯದಿಂದಲೇ ಹೆಚ್ಚಿನ ಶ್ಲೋಕಗಳು ಸರಳವಾಗಿ ಬೋಧಕವಾಗುತ್ತಿರುವುದರಿಂದ ಪ್ರಾಯಃ ಲಕ್ಷಾಲಂಕಾರದಲ್ಲಿ ಕೇವಲ ಕೆಲವೇ ಕಡೆಗಳಲ್ಲಿ ಅಮೋಘವಾಗಿ ವ್ಯಾಖ್ಯಾನ ಮಾಡಿದ್ದಾರೆ.

ಉದಾ: (೧೬.೩೧,೩೨,೩೩) ಶ್ರೀಕೃಷ್ಣ ಅಶ್ವತ್ಥಾಮನಿಗೆ ಹೇಳುವ ಮಾತು— 'ಯಜಮಾನನಾದ ದುರ್ಯೋಧನನ ಉಪ್ಪಿನ ಋಣ ತೀರಿಸಲು ನಿನಗಿದೋ ಸರಿಯಾದ ಸಮಯ. ಅರ್ಜುನನೊಡನೆ ಯುದ್ಧಮಾಡಿ ಆ ಋಣವನ್ನು ತೀರಿಸು. ಬ್ರಾಹ್ಮಣರು ಬರಿ ಕ್ಷುಲ್ಲಕ ಕಾರಣಕ್ಕಾಗಿ ಜಗಳಾಡುತ್ತಾರೆ, ಕ್ಷತ್ರಿಯರು ಹಾಗಲ್ಲ. ಅವರು ಪರಸ್ಪರ ಜಯಕ್ಕಾಗಿ ಹೋರಾಡುತ್ತಾರೆ, ಬ್ರಾಹ್ಮಣನಾದ ನಿನಗೆ ಈ

ಹೋರಾಟ ಶಕ್ಯವಾಗಲಾರದು. ಮೋಹದಿಂದ ಅದನ್ನು ಬಯಸುವಿಯಾದರೆ ಸ್ಥಿರವಾಗಿ ನಿಂತು ಹೋರಾಡು' ಎಂದು ಹೇಳಿದಂತೆ ಕಾಣುತ್ತದೆ.

'ದ್ರೋಣ ಹಸ್ತಿನಾಪುರಿಗೆ ಹೊಟ್ಟೆ ಹೊರೆಯಲು ತಿರುಪೆಬೇಡಿ ಬಂದವನು. ಇಲ್ಲಿ ರಾಜಾಶ್ರಯ ಸುಲಭವಾಗಿ ಸಿಕ್ಕಿತು. ತಂದೆ ಮಕ್ಕಳು ಸುಖವಾಗಿ ತಿಂದು ಕೊಬ್ಬಿದರು. ಅದರಿಂದ ಅವರಿಗೆ ದುರ್ಯೋಧನನ ಋಣ ಬಹಳ ಇತ್ತು. ಅವನು ಆಶ್ರಯ ಕೊಡದಿರುತ್ತಿದ್ದರೆ ಅವರು ಕಂಗಾಲಾಗುತ್ತಿದ್ದರು. ಬಿಲ್ಲು ಹಿಡಿದ ಬ್ರಾಹ್ಮಣನೆಂದು ಅಪಖ್ಯಾತಿಯಿಂದ ಬ್ರಾಹ್ಮಣರು ಮೊದಲೇ ಕೈಬಿಟ್ಟಿದ್ದರು. ಕ್ಷತ್ರಿಯಾಂತಕನಾದ ಪರಶುರಾಮನ ಶಿಷ್ಯನೆಂದು ರಾಜರೂ ಅಂಜಿ ಯಾರೂ ಆಶ್ರಯಕೊಡಲಿಲ್ಲ. ಬ್ರಾಹ್ಮಣನಾಗಿದ್ದು ಬಿಲ್ಲು ಹಿಡಿದುದರ ಫಲವಿದು. ಬಿಲ್ಲುವಿದ್ಯೆ ಇವನಿಗೆ ಏಕೆ ಬೇಕಿತ್ತು? ಕೇವಲ ಕಲಿಸುವ ವೃತ್ತಿಗಾದರೂ ತೃಪ್ತಿಪಟ್ಟುಕೊಳ್ಳಬಹುದಿತ್ತು. ಹಾಗೆ ಮಾಡಲಿಲ್ಲ. ಭೀಷ್ಮ ಪತನಾನಂತರ ಸೇನಾಪತಿ ಪಟ್ಟವನ್ನು ಒಪ್ಪಿ ಯುದ್ಧಕ್ಕೆ ಇಳಿದುದು ಅಕ್ಷಮ್ಯವಾಯಿತು! ಅಶ್ವತ್ಥಾಮನನ್ನೂ ಅದರಲ್ಲಿ ತೊಡಗಿಸಿ, ಅಧ್ಯಯನ ಅಧ್ಯಾಪನಕ್ಕೆಲ್ಲ ತರ್ಪಣ ಕೊಟ್ಟು, ಕುಲಕ್ರಮ ವಾಗಿ ಮುಂದುವರೆಯುವ ಯಾವ ವ್ಯವಸ್ಥೆಯನ್ನೂ ಮಾಡಲಿಲ್ಲ..' ವಿಮರ್ಶಕರು ಹೀಗೇ ದ್ರೋಣ ಅಶ್ವತ್ಥಾಮರ ಪಾತ್ರ ವಧೆ ಮಾಡುವುದನ್ನು ಕಾಣುತ್ತೇವೆ.

ವಸ್ತುತಃ ಮಹಾಭಾರತದಲ್ಲಿ ದ್ರೋಣ ಅಶ್ವತಾಮರು ಬ್ರಾಹ್ಮಣ ಧರ್ಮಕ್ಕೇ ಬಹಳ ನಿಷ್ಠರಾಗಿದ್ದವರು. ಕೇವಲ ಪರಮವೈರಾಗ್ಯದಿಂದ, ಬ್ರಾಹ್ಮಣನಿಗೆ ಧರ್ಮ ಸಮ್ಮತವಾಗಿದ್ದ ಕಲಿಸುವ ವೃತ್ತಿಯನ್ನೂ ಕೂಡ ಬಿಟ್ಟು, ಪೌರೋಹಿತ್ಯವೃತ್ತಿಯನ್ನೂ ಕೂಡ ಬಿಟ್ಟು, ಕೇವಲ ಕಠಿನವಾದ ಶಿಲೋಂಛವೃತ್ತಿಯಲ್ಲಿದ್ದು ಕಠಿನವಾದ ಅಪರಿಗ್ರಹ ನಿಯಮದಿಂದ ತಪಸ್ಸು ಮಾಡುತ್ತಿದ್ದವರು. ಊರವರು ಅದನ್ನು ಕಂಡು ಸಹಿಸಲಾರದೆ ಕನಿಕರದಿಂದ 'ಭಿಕ್ಷಾವೃತ್ತಿಯನ್ನಾದರೂ ಮಾಡಬಾರದೆ' ಎಂದು ಆಕ್ಷೇಪಿಸುತ್ತಿದ್ದರು. ಅಂಥವರ ವಿಷಯದಲ್ಲಿ 'ತಿರುಪೆ ಬೇಡಲು ಹಸ್ತಿನಾಪುರಕ್ಕೆ ಬಂದವರೆಂ'ದು ಆರೋಪ ಮಾಡುವುದು, ಸರ್ವಥಾ ಅನುಚಿತ.

ಶಿಷ್ಯನಾದ ಧರ್ಮರಾಜನೆ ಅವರನ್ನು ಅರಮನೆಗೆ ಕರೆಸಿಕೊಂಡ. ದುರ್ಯೋಧನನಲ್ಲ. ಮತ್ತು ದುರ್ಯೋಧನ ಭೀಮನ ಭಯದಿಂದ ಅವರಲ್ಲಿ ಶರಣಾಗಿದ್ದ. ಆತ ಶಿಷ್ಯನಾಗಿದ್ದಾನೆ ಶರಣಾಗಿದ್ದಾನೆ ಎಂಬ ಕಾರಣಕ್ಕೆ ದ್ರೋಣರು ಅವನೊಂದಿಗೆ ಅವನ ಅರಮನೆಯಲ್ಲಿ ವಾಸ ಮಾಡಿದರು. ಮಗನ ಅನ್ನವನ್ನು

ಉಂಡರೆ ತಂದೆ ಋಣ ತೀರಿಸಬೇಕಾಗಿಲ್ಲ, ಹಾಗೇ ಶಿಷ್ಯನ ಅನ್ನ ಉಂಡರೆ ಗುರುವೂ ಋಣ ತೀರಿಸಬೇಕಾಗಿಲ್ಲ.

ಪಾಂಡವರ ಪಕ್ಷಕ್ಕೆ ಸೇರಿದ್ದರೆ ಶರಣಾಗತರಕ್ಷಣೆಯ ಕರ್ತವ್ಯಕ್ಕೆ ಲೋಪ ಬರುತ್ತಿತ್ತೆಂದು ದುರ್ಯೋಧನನ ಪಕ್ಷದಲ್ಲೇ ಉಳಿದು, ಅವನ ರಕ್ಷಣೆಗಾಗಿ ಸೇನಾಪತಿಪಟ್ಟವನ್ನೂ ವಹಿಸಿದರು.

ಶ್ರೀಕೃಷ್ಣ ಬ್ರಾಹ್ಮಣಪ್ರಿಯ, ಬ್ರಾಹ್ಮಣಧರ್ಮವನ್ನು ಚೆನ್ನಾಗಿ ಬಲ್ಲವ, ಇಂಥ ದ್ರೋಣ ಅಶ್ವತ್ಥಾಮರನ್ನು ದುರ್ಯೋಧನನ ಉಪ್ಪುಂಡವರೆಂದು ಹಳಿಯುವನೆ? ಬ್ರಾಹ್ಮಣರು ಕ್ಷುಲ್ಲಕ ಕಾರಣಕ್ಕಾಗಿ ಜಗಳಾಡುವರೆಂದು ಹಾಸ್ಯಮಾಡುವನೆ? ಅದರಿಂದ ಈ ಮಾತಿಗೆ ಲಕ್ಷಾಲಂಕಾರದಲ್ಲಿ ಸರಿಯಾದ ವ್ಯಾಖ್ಯಾನ ಮಾಡಿದ್ದಾರೆ–

**'ಯುದ್ಧಾತಿಥ್ಯಂ ಪ್ರಯಚ್ಛ ಮೇ'**

'ಅತಿಥಿಯಾಗಿ ಬಂದಿದ್ದೇನೆ. ಯುದ್ಧಾತಿಥ್ಯ ಸತ್ಕಾರ ನೀಡು' ಎಂದು ಅಶ್ವತ್ಥಾಮ ಹೇಳಿದಾಗ ಕೃಷ್ಣ ಅವನಿಗೆ ಹೇಳಿದ ಮಾತು ಇದು— 'ಭರ್ತ'ನೆಂದರೆ ಮನೆಯ ಯಜಮಾನ. ಯಜಮಾನನಾಗಿ ಅರ್ಜುನನು, ಈಗ ಅತಿಥಿಯಾಗಿ ಬಂದ ನಿನಗೆ 'ಪಿಂಡ'ವನ್ನು, ಯುದ್ಧರೂಪವಾದ ಅನ್ನವನ್ನು ಕೊಡುತ್ತಿದ್ದಾನೆ, ಅದನ್ನು 'ನಿರ್ವೇಷ್ಟುಂ' ಅಂದರೆ ಉಣಲು, ಅದನ್ನು ಉಪಜೀವಿಸುವ ಅತಿಥಿಯಾದ ನಿನಗಿದು ಕಾಲ' ಎಂದು.

**'ಆತಿಥ್ಯ ಕರ್ಮಾಭ್ಯರ್ಥಾಯ ದೀಯತಾಂ'**

'ಈಗ ಆತಿಥ್ಯಕರ್ಮವಾಗಿರುವ ಯುದ್ಧವನ್ನು 'ಅಭ್ಯರ್ಥಾಯ' ಬೇಡಿಬಂದ ಈ ಅತಿಥಿಗೆ ನೀಡು' ಇದು ಶ್ರೀಕೃಷ್ಣ ಅರ್ಜುನನಿಗೆ ಹೇಳಿದ ಮಾತು.

**'ಸೂಕ್ಷ್ಮೌ ವಿವಾದೌ ವಿಪ್ರಾಣಾಂ'**

ಎಂದರೆ 'ಕ್ಷುಲ್ಲಕ ಕಾರಣಕ್ಕೆ ಬ್ರಾಹ್ಮಣರು ಜಗಳಾಡುತ್ತಾರೆ' ಎಂದರ್ಥವಲ್ಲ. ಬೌದ್ಧಿಕ ಸೂಕ್ಷ್ಮ ವೇದಾರ್ಥವಿಚಾರದಲ್ಲಿ ಪೂರ್ವಪಕ್ಷ–ಸಿದ್ಧಾಂತರೂಪದಿಂದ ವಾದವಿವಾದ ಗಳನ್ನು ಬ್ರಾಹ್ಮಣರು ನಡೆಸುತ್ತಾರೆ. ಸ್ಥೂಲವಾದ ಕಾಯಿಕ ಜಯಕ್ಕಾಗಿ ಕ್ಷತ್ರಿಯರು ಹೋರಾಡುತ್ತಾರೆ. ಅಶ್ವತ್ಥಾಮ, ನೀನು ಬ್ರಾಹ್ಮಣ ವೇದಾರ್ಥವಿಚಾರವನ್ನೆ ನಡೆಸು, ಯುದ್ಧ ನಿನಗೆ ಬೇಡ ಬೇಕೆನಿಸಿದರೆ ಯುದ್ಧಕ್ಕೆ ನಿಲ್ಲು ಎಂದು ಶ್ರೀಕೃಷ್ಣ ಅಶ್ವತ್ಥಾಮನಿಗೆ ಹೇಳುತ್ತಾನೆ.

**ಸ ಕಂಪಿತಶ್ಚೈತ್ಯ ಇವಾತಿಮಾತ್ರಂ ಸುಪುಷ್ಪಿತೋ ಭೂಮಿತಲೇ ನಿಮಗ್ನಃ ।**
**ತತಶ್ಚಕ್ರಮಪತತ್ ತಸ್ಯ ಭೂಮೌ ಸ ವಿಹ್ವಲಃ ಸಮರೇ ಸೂತಪುತ್ರಃ ॥**

(೮೭.೮೧)

ಕರ್ಣನ ರಥವು ಬ್ರಾಹ್ಮಣಶಾಪದಿಂದ ಅಲುಗಾಡಲು ತೊಡಗಿತು. ರಥಚಕ್ರವು ನೆಲದಲ್ಲಿ ಬಿದ್ದಿತು. ರಥವು ಭೂಕಂಪದಲ್ಲಿ ಹೂಬಿಟ್ಟ ಚೈತ್ಯವೃಕ್ಷ ಕಂಪಿಸುತ್ತ ನೆಲದಲ್ಲಿ ನಿಂತಂತೆ ಕಾಣಿಸಿತು. ಕರ್ಣ ಭಯದಿಂದ ವಿಹ್ವಲನಾದ.

**ಬಲೇನಾಥ ಸ ಸಂಸ್ತಭ್ಯ ಬ್ರಹ್ಮಾಸ್ತ್ರಂ ಸಮುದೈರಯತ್ ।**
**ಐಂದ್ರಾಸ್ತ್ರಮರ್ಜುನಶ್ಚಾಪಿ ತದ್ ದೃಷ್ಟ್ವಾಭ್ಯಮಂತ್ರಯತ್ ॥** (೮೭.೮೯)

**ಅಸ್ತ್ರೈರಸ್ತ್ರಾಣಿ ರಾಧೇಯಃ ಪ್ರತ್ಯಹನ್ ಸವ್ಯಸಾಚಿನಃ ।**
**ಚಕ್ರೇ ಚಾಭ್ಯಧಿಕಂ ಪಾರ್ಥಾತ್ ಸ್ವವೀರ್ಯಂ ಪ್ರತಿ ದರ್ಶಯನ್ ॥**

(೮೭-೧೦೦)

ಕರ್ಣನು ಧೈರ್ಯದಿಂದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ, ಅರ್ಜುನ ಅದಕ್ಕೆ ಪ್ರತಿಯಾಗಿ ಐಂದ್ರಾಸ್ತ್ರವನ್ನು ಪ್ರಯೋಗಿಸಿದ.

ಇಲ್ಲಿ 'ಚಕ್ರಮಪತತ್' ಎಂದು ಚಕ್ರವು ಭೂಮಿಯಲ್ಲಿ ಹೂತುಹೋಯಿತೆಂದು ಹೇಳಿ ಒಡನೆ ಕರ್ಣ ಅರ್ಜುನನನ್ನು ಮೀರಿಸುವಂತೆ ಅಸ್ತ್ರಯುದ್ಧವನ್ನು ನಡೆಸಿದನೆಂದೂ ಹೇಳಿದೆ. ಬಳಿಕ, ಮುಂದೆ,

**ರೌದ್ರಮಸ್ತ್ರಂ ಸಮಾಧಾಯ ಕ್ಷೇಪ್ತುಕಾಮಃ ಕಿರೀಟವಾನ್ ।**
**ತತೋಽಗ್ರಸನ್ಮಹೀ ಚಕ್ರಂ ರಾಧೇಯಸ್ಯ ಮಹಾಮೃಧೇ ॥** (೮೭-೧೦೩)

'ಅರ್ಜುನ ರೌದ್ರಾಸ್ತ್ರವನ್ನು ಎಸೆಯಲು ಉದ್ಯುಕ್ತನಾದಾಗ ಕರ್ಣನ ರಥಚಕ್ರವನ್ನು ಭೂಮಿ ನುಂಗಿತು' ಎಂದಿದೆ.

ಮುಂದೆ ಕರ್ಣ ರಥದಿಂದಿಳಿದು ಚಕ್ರವನ್ನು ಎತ್ತಲು ಪ್ರಯತ್ನಿಸುತ್ತಾನೆ. ಚಕ್ರದೊಂದಿಗೆ ನೆಲವೇ ನಾಲ್ಕು ಅಂಗುಲ ಮೇಲೆ ಬಂದಿತು ಹೊರತು ಚಕ್ರ ನೆಲವನ್ನು ಬಿಟ್ಟು ಮೇಲೆ ಬರಲಿಲ್ಲ. ಕರ್ಣ ಯುದ್ಧ ಮಾಡುವುದಿಲ್ಲ, ಚಕ್ರ ಎತ್ತಲು ಮುಹೂರ್ತ ಕಾಲ ಅವಕಾಶ ಕೊಡೆಂದು ಅರ್ಜುನನನ್ನು ಕೇಳಿಕೊಳ್ಳುತ್ತಾನೆ. ಕೃಷ್ಣ ಅದಕ್ಕೆ ಒಪ್ಪುವುದಿಲ್ಲ. ಅರ್ಜುನ ಕರ್ಣನ ಶಿರಶ್ಛೇದ ಮಾಡುತ್ತಾನೆ.

ಇಲ್ಲಿ ಪ್ರಶ್ನೆಗಳು ಬರುತ್ತವೆ. ಬ್ರಾಹ್ಮಣ ಶಾಪದಿಂದ ಭೂಮಿ ಕರ್ಣನ ರಥಚಕ್ರವನ್ನು ನುಂಗಿದರೂ ಎರಡು ಬಾರಿ ನುಂಗುವುದಿಲ್ಲ. ಆದರೆ 'ಚಕ್ರಮಪತತ್' ಎಂದು ಒಮ್ಮೆ 'ಅಗ್ರಸನ್ನಹೀ ಚಕ್ರಂ' ಎಂದು ಇನ್ನೊಮ್ಮೆ ನೆಲ ಚಕ್ರವನ್ನು ನುಂಗಿದಂತೆ ಕಾಣುತ್ತದೆ—

ಬ್ರಾಹ್ಮಣ ಶಾಪದಂತೆ ಒಮ್ಮೆಯಾದರೂ ಚಕ್ರವನ್ನು ನೆಲ ನುಂಗಿದರೆ ಆಗಲೆ ಕರ್ಣನಿಗೆ ಅಸ್ತ್ರಗಳೆಲ್ಲವೂ ಮರೆಯಾಗಬೇಕು. ಆದರೆ ಇಲ್ಲಿ 'ಚಕ್ರಮಪತತ್' ಎಂದು ಹೇಳಿದಂತೆ ನೆಲವು ಚಕ್ರವನ್ನು ನುಂಗಿದರೂ ಕರ್ಣ ಅಸ್ತ್ರಯುದ್ಧವನ್ನು ಮಾಡುತ್ತಲೇ ಇರುತ್ತಾನೆ. ಅರ್ಜುನನನ್ನೂ ಮೀರಿಸುವಂತೆ ಅಸ್ತ್ರಗಳನ್ನೆಸೆಯುತ್ತಾನೆ!

ರಥಚಕ್ರ ನೆಲದಲ್ಲಿ ಬಿದ್ದಾಗ 'ಸ ವಿಹ್ವಲಃ ಸಮರೇ ಸೂತಪುತ್ರಃ' ಕರ್ಣ ಭಯವಿಹ್ವಲನಾದನೆಂದು ಹೇಳಿ,

**ಛಿನ್ನೇ ಶರೇ ಸರ್ಪಮುಖೇ ಚ ಘೋರೇ ಪಾರ್ಥೇನ ತಸ್ಮಿನ್ ವಿಷಸಾದ ಕರ್ಣಃ ॥**

'ಸರ್ಪಮುಖದ ಘೋರ ಅಸ್ತ್ರವೂ ಕೂಡ ಅರ್ಜುನ ಬಾಣದಿಂದ ಚೂರಾದ್ದರಿಂದ ಕರ್ಣನಿಗೆ ವಿಷಾದ ಉಂಟಾಯಿತು' ಎಂದು ಕರ್ಣನು ವಿಷಾದ ಹೊಂದಿದುದರ ಉಲ್ಲೇಖ ಇಲ್ಲಿ ನಡುವೆ ಬರುತ್ತದೆ. ವಸ್ತುತಃ ಸರ್ಪಾಸ್ತ್ರ ಪುನಃ ತಾನೇ ಕರ್ಣನ ಬಳಿ ಬಂದು ತನ್ನನ್ನು ಪುನಃ ಎಸೆಯಲು ಒತ್ತಾಯಿಸಿದರೂ ಕರ್ಣ ಎರಡನೇ ಬಾರಿಗೆ ಎಸೆಯುವುದಿಲ್ಲ. ಮತ್ತು ಅದು ಚೂರಾದ ಬಳಿಕವೂ ಧೈರ್ಯದಿಂದ ಯುದ್ಧ ಮಾಡುತ್ತಾನೆ. ಆದರಿಂದ ಚಕ್ರ ನೆಲದಲ್ಲಿ ಹೂತುಹೋದಾಕ್ಷಣವೂ ಕರ್ಣ ಭಯ ವಿಹ್ವಲನಾಗುವನೆಂಬುದಕ್ಕೆ ಅರ್ಥವಿಲ್ಲ.

ತಾನು ದಾನಾದಿ ಧರ್ಮವನ್ನು ಬಹಳ ಮಾಡಿದ್ದೇನೆ. ಆದರೂ ಧರ್ಮ ನನ್ನನ್ನು ಕಾಪಾಡುತ್ತಿಲ್ಲ. ಧರ್ಮ ಕಾಪಾಡುತ್ತದೆ ಎಂದು ಎಲ್ಲರೂ ಹೇಳುವುದು ಬರಿ ಸುಳ್ಳೆಂದು ಧರ್ಮವನ್ನು ಈ ಸಂದರ್ಭದಲ್ಲಿ ಕರ್ಣ ಹಳಿಯುತ್ತಾನೆ. ಇದೂ ಅರ್ಥವಿಲ್ಲದ್ದು. ಕರ್ಣ ಬಹಳ ಧಾರ್ಮಿಕ. ಎಂದೂ ಧರ್ಮವನ್ನು ಹಳಿದವನಲ್ಲ. ಬ್ರಾಹ್ಮಣಶಾಪದಿಂದ ಚಕ್ರವನ್ನು ನೆಲ ನುಂಗಿರುವಾಗ ಧರ್ಮವನ್ನು ಹಳಿಯಲು ಕಾರಣವೂ ಇಲ್ಲ. ಅದರಿಂದ ಕರ್ಣ ಧರ್ಮವನ್ನು ಹಳಿಯಲೇ ಇಲ್ಲ.

ಅಸ್ತ್ರಯುದ್ಧವನ್ನು ಕರ್ಣ ಮಾಡುತ್ತಿದ್ದುದರಿಂದ, ಬ್ರಾಹ್ಮಣಶಾಪದಿಂದ ಅಸ್ತ್ರಗಳ ವಿಸ್ಮರಣೆ ಎನ್ನುವುದೂ ನಿಜವಲ್ಲ. ಮೊದಲನೆಸಲ ಚಕ್ರವನ್ನು ನೆಲ ನುಂಗಿದಾಗ

ಕರ್ಣ ಧರ್ಮವನ್ನು ಹಳಿಯಲಿಲ್ಲ. ಅಸ್ತ್ರಗಳೂ ಮರೆಯಾಗಲಿಲ್ಲ. ಎರಡನೆಬಾರಿ ಎರಡೂ ಸಂಭವಿಸಿದೆ ಎಂದರೆ ಈ ಅಧ್ಯಾಯ ಪೂರ್ತಿಪ್ರಕ್ಷಿಪ್ತ ಎನ್ನಬೇಕಾಗುತ್ತದೆ.

ಮೊದಲನೆಬಾರಿ ರಥಚಕ್ರವನ್ನು ನೆಲ ನುಂಗಿದರೂ ಕರ್ಣ ಯುದ್ಧಮಾಡುವ ಸಾಧ್ಯತೆ ಇದ್ದುದಾದರೆ ಎರಡನೆಬಾರಿ ಕರ್ಣನೇಕೆ ಚಕ್ರವನ್ನು ಎತ್ತಲು ಕಾಲಾವಕಾಶ ವನ್ನು ಬೇಡುತ್ತಾನೆ?

ಪರಶುರಾಮನ ಶಾಪದಿಂದ ಅವಸಾನ ಕಾಲದಲ್ಲಿ ಕರ್ಣನಿಗೆ ಬ್ರಹ್ಮಾಸ್ತ್ರವು ಸ್ಮರಣೆಗೆ ಬರುವುದಿಲ್ಲ ಎಂದು ಹಿಂದೆ ಬಂದಿದೆ. ಆದರೆ ಈಗ ಅವಸಾನ ಕಾಲದಲ್ಲಿಯೂ ಕರ್ಣ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ ಉಲ್ಲೇಖವಿದೆ. ಹೀಗಾಗಿ ವಸ್ತುತಃ ಕರ್ಣನಿಗೆ ಪರಶುರಾಮನ ಶಾಪವಾಗಲಿ ಬ್ರಾಹ್ಮಣಶಾಪವಾಗಲಿ ಯಾವ ತೊಂದರೆಯನ್ನೂ ಉಂಟುಮಾಡಲಿಲ್ಲ ಎಂದು ಈ ಪ್ರಕರಣದಿಂದ ಭಾಸವಾಗು ತ್ತದೆ.

ಈ ಅಧ್ಯಾಯವು ಸಮನ್ವಯ ಮಾಡಲಾಗದಂಥ ಪ್ರಕರಣಗಳಿಂದ ತುಂಬಿ ಹೋಗಿದೆ. ಯಥಾಮತಿ ವಿಶ್ಲೇಷಿಸಿದ್ದೇವೆ. ವಿದ್ವಾಂಸರೇನಾದರೂ ವಿಷಯಗಳ ಮೇಲೆ ಬೆಳಕು ಚೆಲ್ಲಿ ತಿಳಿಸುವುದಾದರೆ ಕೃತಜ್ಞತೆಯಿಂದ ಪ್ರಕಟಿಸುತ್ತೇವೆ. ನಾವು ಅನುವಾದಿಸುತ್ತಿರುವ ಪುಸ್ತಕದಲ್ಲಿ ಈ ಅಧ್ಯಾಯದಲ್ಲಿ ೧೧೬ ಶ್ಲೋಕಗಳಿವೆ. ಭಂ.ರಿ.ಇನ್‌ಸ್ಟಿಟ್ಯೂಟ್‌ನವರ ಪುಸ್ತಕದಲ್ಲಿ ಕೇವಲ ೬೫ ಶ್ಲೋಕಗಳಿವೆ' –ಭಾರತ ದರ್ಶನ ಪ್ರಕಾಶನ

ಈ ಎಲ್ಲ ಸಮಸ್ಯೆಗಳಿಗೂ ಲಕ್ಷಾಲಂಕಾರದಲ್ಲಿ ಅತಿ ಸುಲಭವಾದ ಪರಿಹಾರವನ್ನು ಹೇಳಿದ್ದಾರೆ—

**'ಅಪತತ್' ಇತ್ಯುಕ್ತ್ಯಾ ಭೂಮಾವೀಷತ್ ಪಾತ ಏವ ।**
**ತತೋऽಗ್ರಸನ್ಮಹೀ ಚಕ್ರಮಿತ್ಯತ್ರ ತು 'ಅಗ್ರಸತ್'**
**ಇತ್ಯುಕ್ತ್ಯಾ ಸಮ್ಯಗ್ ಭೂಮೌ ಪ್ರವೇಶನಮಿತಿ ವಿವೇಕಃ ।**
**ಅತೋ ನ ಪೌನರುಕ್ತ್ಯಂ ।**

'ಚಕ್ರಂ ಭೂಮೌ ಅಪತತ್' ಚಕ್ರವು ಹಳ್ಳದಲ್ಲಿ ಬಿದ್ದಿತು.
'ಅಗ್ರಸನ್‌ಮಹೀ ಚಕ್ರಂ' ಚಕ್ರವನ್ನು ನೆಲ ನುಂಗಿತು.

—ಇವೆರಡೂ ಒಂದೇ ಅಲ್ಲ. ಬಹಳ ವ್ಯತ್ಯಾಸವಿದೆ. ಚಕ್ರ ಕೇವಲ ನೆಲದಲ್ಲಿ

ಬಿದ್ದಿತೆಂದರೆ ಹೂತು ಹೋಗಿರುವುದಿಲ್ಲ. ಎತ್ತಬಹುದು. ನೆಲ ನುಂಗಿತೆಂದರೆ ಹೂತು ಹೋಗಿರುತ್ತದೆ. ಎತ್ತಲಾಗುವುದಿಲ್ಲ.

ಬ್ರಾಹ್ಮಣ ಶಾಪದಿಂದ ನೆಲ ನುಂಗಿದ್ದು ಒಂದೇಬಾರಿ. ಎರಡು ಬಾರಿ ನುಂಗಿಲ್ಲ. ಮೊದಲಿಗೆ ಚಕ್ರ 'ಅಪತತ್' ಹಳ್ಳದಲ್ಲಿ ಬಿದ್ದಿದ್ದು, ಬ್ರಾಹ್ಮಣಶಾಪದಿಂದ ಹೂತುಹೋಗುವುದರ ಸೂಚನೆ ಮಾತ್ರ. ಆದರಿಂದ ಬ್ರಾಹ್ಮಣಶಾಪದಿಂದಾಗಲೀ ಪರಶುರಾಮಶಾಪದಿಂದಾಗಲಿ ಈಗ ಅಸ್ತ್ರಗಳು ಮರೆಯಾಗಲಿಲ್ಲ. ಕರ್ಣ ಅಸ್ತ್ರಯುದ್ಧವನ್ನು ಮಾಡಿದ. ಸೂಚನೆಯಿಂದ ಭಯ ವಿಹ್ವಲನಾದರೂ ಸಾವರಿಸಿಕೊಂಡು ಅರ್ಜುನನನ್ನೂ ಮೀರಿಸುವಂತೆ ಬ್ರಹ್ಮಾಸ್ತ್ರ ಮುಂತಾದ ಅಸ್ತ್ರಗಳಿಂದ ಯುದ್ಧಮಾಡಿದ. ಎರಡನೆ ಬಾರಿಗೆ ನಿಜವಾಗಿ ಬ್ರಾಹ್ಮಣಶಾಪದಿಂದ 'ಅಗ್ರಸತ್' ಚಕ್ರ ನೆಲದಲ್ಲಿ ಹೂತುಹೋಯಿತು. ಎತ್ತಲಾಗಲಿಲ್ಲ. ಎತ್ತಲು ಕಾಲಾವಕಾಶವನ್ನು ಕೇಳುತ್ತಾನೆ. ಅರ್ಜುನ ಕೊಡುವುದಿಲ್ಲ.

ಮೊದಲನೆ ಬಾರಿಗೆ ಚಕ್ರ ಹಳ್ಳದಲ್ಲಿ ಬಿದ್ದಾಗ ಕರ್ಣ ಧರ್ಮವನ್ನು ಹಳಿಯುತ್ತಾನೆ. ಶಾಪದಿಂದ ಮುಂದೆ ಚಕ್ರವನ್ನು ನೆಲ ನುಂಗಿದರೆ ಧರ್ಮದ ಅಪರಾಧವೇನು ಎಂದರೆ ತಾನು ತನ್ನ ಮೈಯಿಂದ ಕವಚವನ್ನು ಕತ್ತಿಯಿಂದ ಕತ್ತರಿಸಿ ಇಂದ್ರನಿಗೆ ದಾನ ಮಾಡಿದವನು. ಅಂಥ ಧರ್ಮವನ್ನು ನಾನು ಮಾಡಿದವನಾದರೂ ಆ ಧರ್ಮ ನನಗೆ ಬ್ರಾಹ್ಮಣಶಾಪದೋಷವನ್ನು ಪರಿಹರಿಸಲಾರದೆ ಹೋಯಿತೆಂದು ಹತಾಶೆಯಿಂದ ದುಃಖದಿಂದ 'ಧರ್ಮ ಕಾಪಾಡುವುದಿಲ್ಲ, ಕಾಪಾಡುತ್ತದೆ ಎನ್ನುವುದು ಸುಳ್ಳು' ಎನ್ನುತ್ತಿದ್ದಾನೆ. ನಹಿನಿಂದಾನ್ಯಾಯದಿಂದ ಬ್ರಾಹ್ಮಣ ಶಾಪ ಎಷ್ಟು ಅಮೋಘ ಎಂದು ಹೊಗಳುತ್ತಿದ್ದಾನೆ ಕರ್ಣ. ತಾನು ಬ್ರಾಹ್ಮಣನಿಂದ ಶಾಪ ತಂದುಕೊಂಡೆನೆಂದು ಪಶ್ಚಾತ್ತಾಪ ಪಡುತ್ತಿದ್ದಾನೆ, ಬ್ರಾಹ್ಮಣಭಕ್ತನಾದ ಕರ್ಣ.

ಹೀಗೆ ಮಹಾಭಾರತದಲ್ಲಿ ಹೆಜ್ಜೆಹೆಜ್ಜೆಗೆ ವಿಲಕ್ಷಣವಾದ ಪಾಠಗಳು ಮೇಲುನೋಟಕ್ಕೆ ಬಹಳ ಕಿರಿಕಿರಿ ಉಂಟುಮಾಡುವಂತೆ ಕಂಡರೂ ತಾಳ್ಮೆಯಿಂದ ನಿರ್ಣಯ ಹಾಗೂ ಲಕ್ಷಾಲಂಕಾರಗಳ ಬೆಳಕಿನಲ್ಲಿ ವಿಚಾರಮಾಡಿ, ಸರಿಯೆನಿಸಿದರೆ ಒಪ್ಪಬೇಕು. ಪ್ರಕ್ಷಿಪ್ತ, ಅಪಪಾಠ, ಎಂದು ಅವಸರದ ತೀರ್ಮಾನ ಮಾಡುವುದು ಸರಿಯಾಗದು. ಮತ್ತು ಒಂದೇ ಹಸ್ತಪ್ರತಿಯಲ್ಲಿ ಕಂಡುಬಂದಮಾತ್ರಕ್ಕೆ ನಂಬಲರ್ಹವಲ್ಲವೆಂದು ಕೈಬಿಡುವುದೂ ಸರಿಯಾಗದು.

ಭಂ.ರಿ.ಇನ್‌ಸ್ಟಿಟ್ಯೂಟ್‌ನವರು ಹೆಜ್ಜೆಹೆಜ್ಜೆಗೂ ಒಂದು ಶಬ್ದಕ್ಕೆ ಹತ್ತಾರು

ಪಠಾಂತರಗಳನ್ನು ಶ್ರಮಪಟ್ಟು ಕಲೆಹಾಕಿ ಒಂದೇಕಡೆ ಒದಗಿಸಿಕೊಟ್ಟಿದ್ದಾರೆ. ಅವುಗಳಲ್ಲಿ ಕನಿಷ್ಠ ಒಂದಾದರೂ ಶ್ಲೋಕದಲ್ಲಿ ಹೊಂದಿಕೆಯಾಗುವಂಥದ್ದು ಇರುತ್ತದೆ. ಆಗಲೆ ಶ್ಲೋಕವನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ.

ಹೀಗೆ ಕರ್ಣಪರ್ವದಲ್ಲಿ ಶ್ಲೋಕಗಳನ್ನು ಅನೇಕ ಕಡೆ ನಾವು ಪಾಠಾಂತರ ಸಂಯೋಜನೆಗಳಿಂದ ಪುನರ್ನವೀಕರಣ ಮಾಡಿದ್ದುಂಟು. ಹೊರತು ನಾವೇ ಪಾಠಾಂತರ ಸೃಷ್ಟಿಮಾಡಿ ಹಾಕುವ ಸಾಹಸ ಮಾಡಿಲ್ಲ.

ಉದಾ :

**ಭಾನುಷೇಣಾತ್ವದಶಭಿಃ** ಸಾಶ್ವಸೂತ ಧ್ವಜಾಯುಧಂ ।
ಪಶ್ಯತಾಂ ಸುಹೃದಾಂ ಮಧ್ಯೇ ಕರ್ಣಪುತ್ರಮಪಾತಯತ್ ॥ (೪೫.೫೧)

ಇಲ್ಲಿ ಭಂ.ರಿ.ಇನ್‌ಸ್ಟಿಟ್ಯೂಟ್ ಪ್ರತಿಯಲ್ಲಿ ತೋರಿಸಿದ ಪಾಠಾಂತರಗಳು–

ವೃಷಸೇನಂ ಚ ದಶಭಿಃ, ಸುಸೇನಂ ಚೈವ ದಶಭಿಃ, ಸುಷೇಣ ಚೈವ ದಶಭಿಃ, ಭಾನುಷೇಣಂ ಚ ದಶಭಿಃ, ಭಾನುಸೇನಂ ಚ ದಶಭಿಃ, ಭಾನುಮಂತಂ ಚ ದಶಭಿಃ, ಭಾನುದೇವಂ ಚ ದಶಭಿಃ, ಸುಸುಷೇಣಂ ಚ ದಶಭಿಃ, ಸತ್ಯಸೇನಂ ಚ ದಶಭಿಃ–ಎಂದು ಒಂಬತ್ತು ಪಾಠಾಂತರಗಳು. ಇವುಗಳಲ್ಲಿ ನಾವು ಆರಿಸಿಕೊಂಡ ಪಾಠ '**ಸತ್ಯಸೇನಂ ಚ ದಶಭಿಃ**' ಎಂದು. ಇದು ನಿರ್ಣಯಕ್ಕೆ ಅನುಸಾರಿಯಾಗಿದೆ. ಆದರಿಂದ ಮೇಲಿನ ಶ್ಲೋಕದಲ್ಲಿ ಅದನ್ನೇ ಅಳವಡಿಸಿದ್ದೇವೆ ಹೊರತು 'ಸತ್ಯ ಸೇನಂ ಚ' ಎಂದು ಪಾಠ ಸೃಷ್ಟಿ ಮಾಡಿಲ್ಲ.

**ಕೆ.ಹಯವದನ ಪುರಾಣಿಕ**

# ವಿಷಯಾನುಕ್ರಮಣಿಕೆ

## ಕರ್ಣಪರ್ವ (ಸಂಪುಟ 1)

ಶ್ರೀ ಗುರುಭ್ಯೋ ನಮಃ||
ಓಂ ನಮೋ ಭಗವತೇ ವಾಸುದೇವಾಯ||
ಓಂ ನಮೋ ವೇದವ್ಯಾಸಾಯ ||

# ಮಹಾಭಾರತ

ಓಂ ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ।

# ಕರ್ಣಪರ್ವ

## ಒಂದನೆಯ ಅಧ್ಯಾಯ

ಕರ್ಣವಧೆಯ ಸಂಕ್ಷಿಪ್ತ ವೃತ್ತಾಂತ

**ವೈಶಂಪಾಯನಃ**

**ತತೋ ದ್ರೋಣೇ ಹತೇ ರಾಜನ್ ದುರ್ಯೋಧನಮುಖಾ ನೃಪಾಃ ।**
**ಭೃಶಮುದ್ವಿಗ್ನಮನಸೋ ದ್ರೋಣಪುತ್ರಮುಪಾಗಮನ್ ||೧||**

ವೈಶಂಪಾಯನರು ಜನಮೇಜಯ ರಾಜನಿಗೆ ಹೇಳುತ್ತಾರೆ— ರಾಜನೇ, ದ್ರೋಣಾಚಾರ್ಯರು ಹತರಾದಾಗ ದುರ್ಯೋಧನ ಮುಂತಾದ ರಾಜರೆಲ್ಲರು ಬಲು ಉದ್ವಿಗ್ನಚಿತ್ತರಾಗಿ ಅಶ್ವತ್ಥಾಮನ ಬಳಿಗೆ ಬಂದರು.

**ತೇ ದ್ರೋಣಮನುಶೋಚಂತಃ ಕಶ್ಮಲಾಭಿಹತೌಜಸಃ ।**
**ಪರ್ಯುಪಾಸಂತ ಶೋಕಾರ್ತಾಸ್ತತಃ ಶಾರದ್ವತೀಸುತಮ್ ||೨||**

ಅವರು ದ್ರೋಣನ ಬಗ್ಗೆ ಶೋಕಿಸುತ್ತ ಶೋಕದಿಂದ ಶಕ್ತಿಗುಂದಿ ಶೋಕಾರ್ತರಾಗಿ ಅಶ್ವತ್ಥಾಮನ ಬಳಿಯಲ್ಲಿ ಕುಳಿತರು.

ತೇ ಮುಹೂರ್ತಂ ಸಮಾಶ್ವಾಸ್ಯ ಹೇತುಭಿಃ ಶಾಸ್ತ್ರಸಮ್ಮಿತೈಃ ।
ರಾತ್ರ್ಯಾಗಮೇ ಮಹೀಪಾಲಾಃ ಸ್ವಾನಿ ವೇಶ್ಮಾನಿ ಭೇಜಿರೇ ॥೩॥

ಅವರು ಮುಹೂರ್ತಕಾಲ ಶಾಸ್ತ್ರಸಮ್ಮತವಾದ ಮಾತುಗಳಿಂದ ಅವನನ್ನು ಸಂತೈಸಿ, ಕತ್ತಲಾದಾಗ ತಮ್ಮ ಬಿಡಾರಗಳಿಗೆ ನಡೆದರು.

ತೇ ವೇಶ್ಮಸ್ವಪಿ ಕೌರವ್ಯ ಪೃಥ್ವೀಶಾ ನಾಪ್ನುವನ್ ಸುಖಮ್ ।
ಚಿಂತಯಂತಃ ಕ್ಷಯಂ ತೀವ್ರಂ ದುಃಖಶೋಕಸಮನ್ವಿತಾಃ ॥೪॥

ಜನಮೇಜಯ ರಾಜನೆ, ಅವರಿಗೆ ಬಿಡಾರಗಳಲ್ಲಿಯೂ ನೆಮ್ಮದಿ ಸಿಗಲಿಲ್ಲ. ತೀವ್ರವಾದ ದುಃಖ, ಶೋಕಗಳಿಂದ ಯುಕ್ತರಾಗಿ ತಮಗಾದ ನಷ್ಟವನ್ನೇ ಚಿಂತಿಸಿದರು.

ವಿಶೇಷತಃ ಸೂತಪುತ್ರೋ ರಾಜಾ ಚೈವ ಸುಯೋಧನಃ ।
ದುಃಶಾಸನಶ್ಚ ಶಕುನಿಃ ಸೌಬಲಶ್ಚ ಮಹಾಬಲಃ ॥೫॥

ಉಷಿತಾಸ್ತೇ ನಿಶಾಂ ತಾಂ ತು ದುರ್ಯೋಧನನಿವೇಶನೇ ।
ಚಿಂತಯಂತಃ ಪರಿಕ್ಲೇಶಾನ್ ಪಾಂಡವಾನಾಂ ಮಹಾತ್ಮನಾಮ್ ॥೬॥

ಅವರಲ್ಲಿಯೂ ವಿಶೇಷವಾಗಿ ರಾಜಾ ಸುಯೋಧನ, ಕರ್ಣ, ದುಃಶಾಸನ, ಶಕುನಿ ಇವರು ನಾಲ್ವರು ದುರ್ಯೋಧನನ ಬಿಡಾರದಲ್ಲಿದ್ದು ರಾತ್ರಿ ಇಡೀ ಮಹಾತ್ಮರಾದ ಪಾಂಡವರಿಗೆ ತಾವು ಕೊಟ್ಟಿದ್ದ ಕಷ್ಟ-ನಷ್ಟಗಳನ್ನೇ ಚಿಂತಿಸಿದರು.

ಯತ್ತದ್ ದ್ಯೂತೇ ಪರಿಕ್ಲಿಷ್ಟಾ ಕೃಷ್ಣಾ ಚಾನಾಯಿತಾ ಸಭಾಮ್ ।
ತತ್ ಸ್ಮರಂತೋಽನುಶೋಚಂತೋ ಭೃಶಮುದ್ವಿಗ್ನಚೇತಸಃ ॥೭॥

ದ್ಯೂತಸಭೆಯಲ್ಲಿ ದ್ರೌಪದಿಯನ್ನು ಸೆಳೆದು ತಂದು ಅವಳಿಗೆ ನಾನಾ ಬಗೆಯ ಕ್ಲೇಶ ಉಂಟುಮಾಡಿದ್ದನ್ನು ನೆನೆದು ಪರಿತಪಿಸುತ್ತ ಬಹಳ ಉದ್ವಿಗ್ನಚಿತ್ತರಾದರು.

ತಥಾ ತು ಸಂಚಿಂತಯತಾಂ ತಾನ್ ಕ್ಲೇಶಾನ್ ದ್ಯೂತಕಾರಿತಾನ್ ।
ಕೃಚ್ಛ್ರೇಣ ಕ್ಷಣದಾ ರಾಜನ್ ಜಗಾಮಾಬ್ದಶತೋಪಮಾ ॥೮॥

ಹಾಗೇ ದ್ಯೂತದ ಮೂಲಕ ತಾವು ಅವರಿಗೆ ನೀಡಿದ ಕ್ಲೇಶಗಳನ್ನೇ ಚಿಂತಿಸುತ್ತ ಕಷ್ಟದಿಂದ ಆ ಒಂದು ರಾತ್ರಿಯನ್ನು ನೂರು ವರ್ಷಗಳಂತೆ ಕಳೆದರು.

**ತತಃ ಪ್ರಭಾತೇ ವಿಮಲೇ ಸ್ಥಿತಾ ದಿಷ್ಟಸ್ಯ ಶಾಸನೇ ।**
**ಚಕ್ರುರಾವಶ್ಯಕಂ ಸರ್ವೇ ವಿಧಿದೃಷ್ಟೇನ ಕರ್ಮಣಾ ॥೯॥**

ಬಳಿಕ ದೈವಸಂಕಲ್ಪವಿದ್ದಂತಾಗಲಿ ಎಂದುಕೊಂಡು, ಬೆಳಗಾದಾಗ ಎಲ್ಲರೂ ವಿಧ್ಯುಕ್ತರೀತಿಯಿಂದ ಆವಶ್ಯಕ ಕರ್ಮಗಳನ್ನು ಮಾಡಿ ಮುಗಿಸಿದರು.

**ತೇ ಕೃತ್ವಾऽವಶ್ಯಕಾರ್ಯಾಣಿ ಸಮಾಶ್ವಸ್ಯ ಚ ಭಾರತ ।**
**ಯೋಗಮಾಜ್ಞಾಪಯಾಮಾಸುರ್ಯುದ್ಧಾಯ ಚ ವಿನಿರ್ಯಯುಃ॥೧೦॥**

ರಾಜನೇ, ಆವಶ್ಯಕ ಕರ್ಮಗಳನ್ನು ತೀರಿಸಿದ ಬಳಿಕ ಅವರು ತಮಗೆ ತಾವೇ ಸಮಾಧಾನ ತಂದುಕೊಂಡು ಯುದ್ಧಸನ್ನಾಹಕ್ಕೆ ಸೇನೆಗೆ ಆದೇಶ ನೀಡಿದರು. ಯುದ್ಧಕ್ಕೆ ಹೊರಟರು.

**ಕರ್ಣಂ ಸೇನಾಪತಿಂ ಕೃತ್ವಾ ಕೃತಕೌತುಕಮಂಗಲಾಃ ।**
**ಪೂಜಯಿತ್ವಾ ದ್ವಿಜಶ್ರೇಷ್ಠಾನ್ ದಧಿಪಾತ್ರಘೃತಾಕ್ಷತೈಃ ॥೧೧॥**

**ಗೋಭಿರಶ್ವೈಶ್ಚ ನಿಷ್ಕೈಶ್ಚ ವಾಸೋಭಿಶ್ಚ ಮಹಾಧನೈಃ ।**
**ವಂದ್ಯಮಾನಾ ಜಯಾಶೀರ್ಭಿಃ ಸೂತಮಾಗಧವಂದಿಭಿಃ ॥೧೨॥**

**ತಥೈವ ಪಾಂಡವಾ ರಾಜನ್ ಕೃತಪೂರ್ವಾಹ್ಣಿಕಕ್ರಿಯಾಃ ।**
**ಶಿಬಿರಾನ್ನಿರ್ಯಯುಸ್ತೂರ್ಣಂ ಯುದ್ಧಾಯ ಕೃತನಿಶ್ಚಯಾಃ ॥೧೩॥**

ಕರ್ಣನಿಗೆ ಸೇನಾಧಿಪತ್ಯ ನೀಡಿ ವಿಧ್ಯುಕ್ತವಾಗಿ ಮಂಗಳಕಾರ್ಯಗಳನ್ನು ನಡೆಸಿದರು. ಬ್ರಾಹ್ಮಣರಿಗೆ ದಧಿಪಾತ್ರೆ, ತುಪ್ಪ ಅಕ್ಷತೆ, ಗೋ, ಅಶ್ವ, ಕಂಠಾಭರಣ, ಅಮೂಲ್ಯ ವಸ್ತ್ರಗಳನ್ನು ನೀಡಿ ಅವರಿಂದ ಜಯದ ಆಶೀರ್ವಾದ ಪಡೆದು ಸೂತ ಮಾಗಧ ವಂದಿಗಳಿಂದ ಸ್ತುತಿಸಲ್ಪಡುತ್ತ ಶಿಬಿರದಿಂದ ಹೊರಗೆ ನಡೆದರು. ರಾಜನೇ, ಪಾಂಡವರೂ ಕೂಡ ಹಾಗೆಯೇ ಪ್ರಾತರಾಹ್ಣಿಕಗಳನ್ನು ತೀರಿಸಿ ಯುದ್ಧಕ್ಕೆ ನಿಶ್ಚಯಮಾಡಿಕೊಂಡು ಶಿಬಿರದಿಂದ ಹೊರಗೆ ನಡೆದರು.

ಅವರು ದ್ರೋಣನ ಬಗ್ಗೆ ಶೋಕಿಸುತ್ತ ಶೋಕದಿಂದ ಶಕ್ತಿಗುಂದಿ ಶೋಕಾರ್ತರಾಗಿ ಅಶ್ವತ್ಥಾಮನ ಬಳಿಯಲ್ಲಿ ಕುಳಿತರು.

ತೇ ಮುಹೂರ್ತಂ ಸಮಾಶ್ವಾಸ್ಯ ಹೇತುಭಿಃ ಶಾಸ್ತ್ರಸಮ್ಮಿತೈಃ ।
ರಾತ್ರ್ಯಾಗಮೇ ಮಹೀಪಾಲಾಃ ಸ್ವಾನಿ ವೇಶ್ಮಾನಿ ಭೇಜಿರೇ ॥೩॥

ಅವರು ಮುಹೂರ್ತಕಾಲ ಶಾಸ್ತ್ರಸಮ್ಮತವಾದ ಮಾತುಗಳಿಂದ ಅವನನ್ನು ಸಂತೈಸಿ, ಕತ್ತಲಾದಾಗ ತಮ್ಮ ಬಿಡಾರಗಳಿಗೆ ನಡೆದರು.

ತೇ ವೇಶ್ಮಸ್ವಪಿ ಕೌರವ್ಯ ಪೃಥ್ವೀಶಾ ನಾಪ್ನುವನ್ ಸುಖಮ್ ।
ಚಿಂತಯಂತಃ ಕ್ಷಯಂ ತೀವ್ರಂ ದುಃಖಶೋಕಸಮನ್ವಿತಾಃ ॥೪॥

ಜನಮೇಜಯ ರಾಜನೆ, ಅವರಿಗೆ ಬಿಡಾರಗಳಲ್ಲಿಯೂ ನೆಮ್ಮದಿ ಸಿಗಲಿಲ್ಲ. ತೀವ್ರವಾದ ದುಃಖ, ಶೋಕಗಳಿಂದ ಯುಕ್ತರಾಗಿ ತಮಗಾದ ನಷ್ಟವನ್ನೇ ಚಿಂತಿಸಿದರು.

ವಿಶೇಷತಃ ಸೂತಪುತ್ರೋ ರಾಜಾ ಚೈವ ಸುಯೋಧನಃ ।
ದುಃಶಾಸನಶ್ಚ ಶಕುನಿಃ ಸೌಬಲಶ್ಚ ಮಹಾಬಲಃ ॥೫॥

ಉಷಿತಾಸ್ತೇ ನಿಶಾಂ ತಾಂ ತು ದುರ್ಯೋಧನನಿವೇಶನೇ ।
ಚಿಂತಯಂತಃ ಪರಿಕ್ಲೇಶಾನ್ ಪಾಂಡವಾನಾಂ ಮಹಾತ್ಮನಾಮ್ ॥೬॥

ಅವರಲ್ಲಿಯೂ ವಿಶೇಷವಾಗಿ ರಾಜಾ ಸುಯೋಧನ, ಕರ್ಣ, ದುಃಶಾಸನ, ಶಕುನಿ ಇವರು ನಾಲ್ವರು ದುರ್ಯೋಧನನ ಬಿಡಾರದಲ್ಲಿದ್ದು ರಾತ್ರಿ ಇಡೀ ಮಹಾತ್ಮರಾದ ಪಾಂಡವರಿಗೆ ತಾವು ಕೊಟ್ಟಿದ್ದ ಕಷ್ಟ-ನಷ್ಟಗಳನ್ನೇ ಚಿಂತಿಸಿದರು.

ಯತ್ತದ್ ದ್ಯೂತೇ ಪರಿಕ್ಲಿಷ್ಟಾ ಕೃಷ್ಣಾ ಚಾನಾಯಿತಾ ಸಭಾಮ್ ।
ತತ್ ಸ್ಮರಂತೋಽನುಶೋಚಂತೋ ಭೃಶಮುದ್ವಿಗ್ನಚೇತಸಃ ॥೭॥

ದ್ಯೂತಸಭೆಯಲ್ಲಿ ದ್ರೌಪದಿಯನ್ನು ಸೆಳೆದು ತಂದು ಅವಳಿಗೆ ನಾನಾ ಬಗೆಯ ಕ್ಲೇಶ ಉಂಟುಮಾಡಿದ್ದನ್ನು ನೆನೆದು ಪರಿತಪಿಸುತ್ತ ಬಹಳ ಉದ್ವಿಗ್ನಚಿತ್ತರಾದರು.

ತಥಾ ತು ಸಂಚಿಂತಯತಾಂ ತಾನ್ ಕ್ಲೇಶಾನ್ ದ್ಯೂತಕಾರಿತಾನ್ ।
ಕೃಚ್ಛ್ರೇಣ ಕ್ಷಣದಾ ರಾಜನ್ ಜಗಾಮಾಬ್ದಶತೋಪಮಾ ॥೮॥

ಹಾಗೇ ದ್ಯೂತದ ಮೂಲಕ ತಾವು ಅವರಿಗೆ ನೀಡಿದ ಕ್ಲೇಶಗಳನ್ನೇ ಚಿಂತಿಸುತ್ತ ಕಷ್ಟದಿಂದ ಆ ಒಂದು ರಾತ್ರಿಯನ್ನು ನೂರು ವರ್ಷಗಳಂತೆ ಕಳೆದರು.

**ತತಃ ಪ್ರಭಾತೇ ವಿಮಲೇ ಸ್ಥಿತಾ ದಿಷ್ಟಸ್ಯ ಶಾಸನೇ ।**
**ಚಕ್ರುರಾವಶ್ಯಕಂ ಸರ್ವೇ ವಿಧಿದೃಷ್ಟೇನ ಕರ್ಮಣಾ ॥೯॥**

ಬಳಿಕ ದೈವಸಂಕಲ್ಪವಿದ್ದಂತಾಗಲಿ ಎಂದುಕೊಂಡು, ಬೆಳಗಾದಾಗ ಎಲ್ಲರೂ ವಿಧ್ಯುಕ್ತರೀತಿಯಿಂದ ಆವಶ್ಯಕ ಕರ್ಮಗಳನ್ನು ಮಾಡಿ ಮುಗಿಸಿದರು.

**ತೇ ಕೃತ್ವಾऽವಶ್ಯಕಾರ್ಯಾಣಿ ಸಮಾಶ್ವಸ್ಯ ಚ ಭಾರತ ।**
**ಯೋಗಮಾಜ್ಞಾಪಯಾಮಾಸುರ್ಯುದ್ಧಾಯ ಚ ವಿನಿರ್ಯಯುಃ॥೧೦॥**

ರಾಜನೇ, ಆವಶ್ಯಕ ಕರ್ಮಗಳನ್ನು ತೀರಿಸಿದ ಬಳಿಕ ಅವರು ತಮಗೆ ತಾವೇ ಸಮಾಧಾನ ತಂದುಕೊಂಡು ಯುದ್ಧಸನ್ನಾಹಕ್ಕೆ ಸೇನೆಗೆ ಆದೇಶ ನೀಡಿದರು. ಯುದ್ಧಕ್ಕೆ ಹೊರಟರು.

**ಕರ್ಣಂ ಸೇನಾಪತಿಂ ಕೃತ್ವಾ ಕೃತಕೌತುಕಮಂಗಲಾಃ ।**
**ಪೂಜಯಿತ್ವಾ ದ್ವಿಜಶ್ರೇಷ್ಠಾನ್ ದಧಿಪಾತ್ರಘೃತಾಕ್ಷತೈಃ ॥೧೧॥**

**ಗೋಭಿರಶ್ವೈಶ್ಚ ನಿಷ್ಕೈಶ್ಚ ವಾಸೋಭಿಶ್ಚ ಮಹಾಧನೈಃ ।**
**ವಂದ್ಯಮಾನಾ ಜಯಾಶೀರ್ಭಿಃ ಸೂತಮಾಗಧವಂದಿಭಿಃ ॥೧೨॥**

**ತಥೈವ ಪಾಂಡವಾ ರಾಜನ್ ಕೃತಪೂರ್ವಾಹ್ಣಿಕಕ್ರಿಯಾಃ ।**
**ಶಿಬಿರಾನ್ನಿರ್ಯಯುಸ್ತೂರ್ಣಂ ಯುದ್ಧಾಯ ಕೃತನಿಶ್ಚಯಾಃ ॥೧೩॥**

ಕರ್ಣನಿಗೆ ಸೇನಾಧಿಪತ್ಯ ನೀಡಿ ವಿಧ್ಯುಕ್ತವಾಗಿ ಮಂಗಳಕಾರ್ಯಗಳನ್ನು ನಡೆಸಿದರು. ಬ್ರಾಹ್ಮಣರಿಗೆ ದಧಿಪಾತ್ರೆ, ತುಪ್ಪ ಅಕ್ಷತೆ, ಗೋ, ಅಶ್ವ, ಕಂಠಾಭರಣ, ಅಮೂಲ್ಯ ವಸ್ತ್ರಗಳನ್ನು ನೀಡಿ ಅವರಿಂದ ಜಯದ ಆಶೀರ್ವಾದ ಪಡೆದು ಸೂತ ಮಾಗಧ ವಂದಿಗಳಿಂದ ಸ್ತುತಿಸಲ್ಪಡುತ್ತ ಶಿಬಿರದಿಂದ ಹೊರಗೆ ನಡೆದರು. ರಾಜನೇ, ಪಾಂಡವರೂ ಕೂಡ ಹಾಗೆಯೇ ಪ್ರಾತರಾಹ್ನಿಕಗಳನ್ನು ತೀರಿಸಿ ಯುದ್ಧಕ್ಕೆ ನಿಶ್ಚಯಮಾಡಿಕೊಂಡು ಶಿಬಿರದಿಂದ ಹೊರಗೆ ನಡೆದರು.

ತತಃ ಪ್ರವವೃತೇ ಯುದ್ಧಂ ತುಮುಲಂ ರೋಮಹರ್ಷಣಮ್ ।
ಕುರೂಣಾಂ ಪಾಂಡವಾನಾಂ ಚ ಪರಸ್ಪರಜಯೈಷಿಣಾಮ್ ॥೧೪॥

ಬಳಿಕ ಪರಸ್ಪರ ಜಯಾಕಾಂಕ್ಷೆಯಿಂದ ಹೊರಟ ಕುರು–ಪಾಂಡವರಲ್ಲಿ ರೋಮಾಂಚಕರವಾದ ತುಮುಲ ಯುದ್ಧ ನಡೆಯಿತು.

ತಯೋರ್ದ್ವಿದಿವಸಂ ಯುದ್ಧಂ ಕುರುಪಾಂಡವಸೇನಯೋಃ ।
ಕರ್ಣೇ ಸೇನಾಪತೌ ರಾಜನ್ ಬಭೂವಾದ್ಭುತದರ್ಶನಮ್ ॥೧೫॥

ಕುರು–ಪಾಂಡವಸೈನ್ಯಗಳಲ್ಲಿ ಕರ್ಣನ ಸೇನಾಧಿಪತ್ಯದಲ್ಲಿ ನಡೆದ ಎರಡು ದಿನಗಳ ಯುದ್ಧ ನೋಡಲು ಅದ್ಭುತವಾಗಿತ್ತು.

ತತಃ ಶತ್ರುಕ್ಷಯಂ ಕೃತ್ವಾ ಸುಮಹಾಂತಂ ರಣೇ ವೃಷಃ ।
ಪಶ್ಯತಾಂ ಧಾರ್ತರಾಷ್ಟ್ರಾಣಾಂ ಫಲ್ಗುನೇನ ನಿಪಾತಿತಃ ॥೧೬॥

ಬಳಿಕ ಕರ್ಣನು ಶತ್ರುಪಕ್ಷದಲ್ಲಿ ಅಪಾರ ನಷ್ಟ ಉಂಟುಮಾಡಿ ಕೌರವರು ನೋಡುತ್ತಿದ್ದಂತೇ ಅರ್ಜುನನಿಂದ ಹತನಾದ.

ತತಸ್ತು ಸಂಜಯಃ ಸರ್ವಂ ಗತ್ವಾ ನಾಗಪುರಂ ದ್ರುತಮ್ ।
ಆಚಷ್ಟ ಧೃತರಾಷ್ಟ್ರಾಯ ಯದ್ ವೃತ್ತಂ ಕುರುಜಾಂಗಲೇ ॥೧೭॥

ಆಗ ಸಂಜಯನು ಬೇಗನೆ ಹಸ್ತಿನಾಪುರಕ್ಕೆ ಹೋಗಿ, ಧೃತರಾಷ್ಟ್ರನಿಗೆ ಕುರುಕ್ಷೇತ್ರದಲ್ಲಿ ನಡೆದ ಎಲ್ಲ ವೃತ್ತಾಂತವನ್ನೂ ಹೇಳಿದ

ಜನಮೇಜಯಃ

ಆಪಗೇಯಂ ಹತಂ ಶ್ರುತ್ವಾ ದ್ರೋಣಂ ಚಾಪಿ ಮಹಾರಥಮ್ ।
ಆಜಗಾಮ ಪರಾಮಾರ್ತಿಂ ವೃದ್ಧೋ ರಾಜಾಽಂಬಿಕಾಸುತಃ ॥೧೮॥

ಸ ಶ್ರುತ್ವಾ ನಿಹತಂ ಕರ್ಣಂ ದುರ್ಯೋಧನಹಿತೈಷಿಣಮ್ ।
ಕಥಂ ದ್ವಿಜವರ ಪ್ರಾಣಾನಧಾರಯತ ದುಃಖಿತಃ ॥೧೯॥

ಜನಮೇಜಯರಾಜನು ವೈಶಂಪಾಯನರನ್ನು ಕೇಳುತ್ತಾನೆ— ಮಹಾರಥರಾದ

ಭೀಷ್ಮ ಹಾಗೂ ದ್ರೋಣರಿಬ್ಬರೂ ಹತರಾದುದನ್ನು ಕೇಳಿದಾಗಲೆ ರಾಜಾ ಧೃತರಾಷ್ಟ್ರನು ಅತ್ಯಂತ ದುಃಖಾರ್ತನಾಗಿದ್ದ. ಇದೀಗ ದುರ್ಯೋಧನನಿಗೆ ಹಿತೈಷಿಯಾದ ಕರ್ಣನೂ ಹತನಾದುದನ್ನು ಕೇಳಿ ದುಃಖಿತನಾದ ರಾಜ ಬದುಕಿರಲು ಹೇಗೆ ಶಕ್ತನಾದ?

ಯಸ್ಮಿನ್ ಜಯಾಶಾಂ ಪುತ್ರಾಣಾಂ ಸಮಮನ್ಯತ ಪಾರ್ಥಿವಃ ।
ತಸ್ಮಿನ್ ಹತೇ ಸ ಕೌರವ್ಯಃ ಕಥಂ ಪ್ರಾಣಾನಧಾರಯತ್ ॥೨೦॥

ತನ್ನ ಮಕ್ಕಳಿಗೆ ಜಯದಾಸೆ ಕರ್ಣನನ್ನೇ ಅವಲಂಬಿಸಿದ್ದಾಗ ಅವನು ಹತನಾದುದನ್ನು ಕೇಳಿ ಅವನು ಹೇಗೆ ತಾನೇ ಪ್ರಾಣಗಳನ್ನು ಹಿಡಿದುಕೊಂಡಿದ್ದ?

ದುರ್ಮರತ್ವಮಹಂ ಮನ್ಯೇ ನೃಣಾಂ ಕೃಚ್ಛ್ರೇಽಪಿ ವರ್ತತಾಮ್ ।
ಯತ್ರ ಕರ್ಣಂ ಹತಂ ಶ್ರುತ್ವಾ ನಾತ್ಯಜಜ್ಜೀವಿತಂ ನೃಪಃ ॥೨೧॥

ಮನುಷ್ಯರಿಗೆ ಎಷ್ಟೇ ಕಷ್ಟಬಂದರೂ ಪ್ರಾಣತ್ಯಾಗ ಮಾಡುವುದು ಶಕ್ಯವಲ್ಲ ಎಂದು ನಾನು ಭಾವಿಸುತ್ತೇನೆ. ಏಕೆಂದರೆ, ಕರ್ಣ ಹತನಾದುದನ್ನು ಕೇಳಿಯೂ ರಾಜ ಪ್ರಾಣಗಳನ್ನು ಬಿಡಲಿಲ್ಲ!

ತಥಾ ಶಾಂತನವಂ ವೃದ್ಧಂ ಬ್ರಹ್ಮನ್ ಬಾಹ್ಲೀಕಮೇವ ಚ ।
ದ್ರೋಣಂ ಚ ಸೋಮದತ್ತಂ ಚ ಭೂರಿಶ್ರವಸಮೇವ ಚ ॥೨೨॥

ತಥೈವ ಚಾನ್ಯಾನ್ ಸುಹೃದಃ ಪುತ್ರಾನ್ ಪೌತ್ರಾಂಶ್ಚ ಪಾತಿತಾನ್ ।
ಶ್ರುತ್ವಾ ಯನ್ನಾಜಹಾತ್ ಪ್ರಾಣಾಂಸ್ತನ್ಮನ್ಯೇ ದುಷ್ಕರಂ ದ್ವಿಜ ॥೨೩॥

ಮುನಿಯೇ, ವೃದ್ಧನಾದ ಭೀಷ್ಮ ಬಾಹ್ಲೀಕ ದ್ರೋಣ ಸೋಮದತ್ತ ಭೂರಿಶ್ರವ, ಇವರನ್ನೂ ಹಾಗೇ ಬೇರೆ ಮಿತ್ರ ರಾಜರನ್ನೂ ಪುತ್ರ ಪೌತ್ರರನ್ನೂ ತಾನು ಅಗಲಿದುದನ್ನು ಕೇಳಿಯೂ ರಾಜ ಪ್ರಾಣಗಳನ್ನು ಬಿಡಲಿಲ್ಲ ಎಂದಮೇಲೆ ಅದು ದುಷ್ಕರವೆಂದೇ ನಾನು ಭಾವಿಸುತ್ತೇನೆ.

ಏತನ್ಮೇ ಸರ್ವಮಾಚಕ್ಷ್ವ ವಿಸ್ತರೇಣ ಮಹಾಮುನೇ ।
ನ ಹಿ ತೃಪ್ಯಾಮಿ ಪೂರ್ವೇಷಾಂ ಶೃಣ್ವಾನಶ್ಚರಿತಂ ಮಹತ್ ॥೨೪॥

ಮಹಾಮುನಿಯೇ, ಇದನ್ನೆಲ್ಲ ವಿಸ್ತಾರವಾಗಿ ನನಗೆ ಹೇಳು, ಪೂರ್ವಿಕರ ದೊಡ್ಡ ಇತಿಹಾಸವನ್ನು ಕೇಳಿದಷ್ಟೂ ನನಗೆ ತೃಪ್ತಿಯಾಗುವುದಿಲ್ಲ.

ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ಪ್ರಥಮೋಽಧ್ಯಾಯಃ ॥೧॥



## ಎರಡನೆಯ ಅಧ್ಯಾಯ

ದ್ರೋಣವಧೆಗೆ ಕುರುಸೈನ್ಯ ಶೋಕಿಸಿತು.

**ವೈಶಂಪಾಯನಃ**

**ಹತೇ ಕರ್ಣೇ ಮಹಾರಾಜ ನಿಶಿ ಗಾವಲ್ಗಣಿಸ್ತದಾ ।**
**ದೀನೋ ಯಯೌ ನಾಗಪುರಮಶ್ವೈರ್ವಾತಸಮೈರ್ಜವೇ ॥೧॥**

ವೈಶಂಪಾಯನರು ಜನಮೇಜಯ ರಾಜನಿಗೆ ಹೇಳುತ್ತಾರೆ—

ಮಹಾರಾಜ, ಕರ್ಣನು ಹತನಾದಾಗ ಅದೇರಾತ್ರಿ ಸಂಜಯನು ದುಃಖಿತನಾಗಿ ವಾಯುವೇಗದ ಕುದುರೆಗಳನ್ನು ಕಟ್ಟಿದ ರಥದಿಂದ ಹಸ್ತಿನಾವತಿಗೆ ಹೋದನು.

**ಸ ಹಾಸ್ತಿನಪುರಂ ಗತ್ವಾ ಭೃಶಮುದ್ವಿಗ್ನಚೇತನಃ ।**
**ಜಗಾಮ ಧೃತರಾಷ್ಟ್ರಸ್ಯ ಕ್ಷಯಂ ಪ್ರಕ್ಷೀಣಬಾಂಧವಮ್ ॥೨॥**

ಬಲು ಉದ್ವಿಗ್ನಚಿತ್ತನಾದ ಅವನು ಹಸ್ತಿನಾವತಿಗೆ ಹೋಗಿ ಬಂಧುಜನರಿಂದ ಶೂನ್ಯವಾಗಿದ್ದ ಧೃತರಾಷ್ಟ್ರನ ಅರಮನೆಯನ್ನು ಪ್ರವೇಶಿಸಿದ.

**ಸ ತಮುದ್ವೀಕ್ಷ್ಯ ರಾಜಾನಂ ಕಶ್ಮಲಾಭಿಹತೌಜಸಮ್ ।**
**ವವಂದೇ ಪ್ರಾಂಜಲಿರ್ಭೂತ್ವಾ ಮೂರ್ಧ್ನಾ ಪಾದೌ ನೃಪಸ್ಯ ಹ ॥೩॥**

ದುಃಖದಿಂದ ಬಲಗುಂದಿದ್ದ ರಾಜನನ್ನು ಕಂಡು ಕೈಮುಗಿದು ತಲೆಯಿಂದ ರಾಜನ ಕಾಲುಗಳನ್ನು ವಂದಿಸಿದ.

ಸಂಪೂಜ್ಯ ಚ ಯಥಾನ್ಯಾಯಂ ಧೃತರಾಷ್ಟ್ರಂ ಮಹೀಪತಿಮ್ ।
ಹಾ ಕಷ್ಟಮಿತಿ ಚೋಕ್ತ್ವಾ ಸ ತತೋ ವಚನಮಾದದೇ ॥೪॥

ರಾಜಾ ಧೃತರಾಷ್ಟ್ರನನ್ನು ವಿಧ್ಯುಕ್ತವಾಗಿ ಉಪಚರಿಸಿ 'ಅಯ್ಯೋ ಕಷ್ಟವೆ!' ಎನ್ನುತ್ತ ಮಾತನಾಡಲು ಪ್ರಾರಂಭಿಸಿದ.

ಸಂಜಯೋಽಹಂ ಕ್ಷಿತಿಪತೇ ಕಚ್ಚಿದಾಸ್ತೇ ಸುಖಂ ಭವಾನ್ ।
ಸ್ವದೋಷೈರಾಪದಂ ಪ್ರಾಪ್ಯ ಕಚ್ಚಿನ್ನಾದ್ಯ ವಿಮುಹ್ಯತಿ ॥೫॥

ರಾಜನೇ, ನಾನು ಸಂಜಯ, ನೀನು ಸುಖವಾಗಿರುವೆ ತಾನೆ? ನಿನ್ನ ತಪ್ಪುಗಳಿಂದಲೇ ನೀನು ಕಷ್ಟಕ್ಕೆ ಈಡಾಗಿ ಇಂದಿಗೂ ಮೈಮರೆಯದೇ ಇರುವೆ ತಾನೆ?

ಹಿತಾನ್ಯುಕ್ತಾನಿ ವಿದುರದ್ರೋಣಗಾಂಗೇಯಕೇಶವೈಃ ।
ಅಗೃಹೀತಾನ್ಯನುಸ್ಮೃತ್ಯ ಕಚ್ಚಿನ್ನ ಕುರುಷೇ ವ್ಯಥಾಮ್ ॥೬॥

ವಿದುರ ದ್ರೋಣ ಭೀಷ್ಮ ಕೃಷ್ಣ ಎಲ್ಲರೂ ನಿನಗೆ ಹಿತವನ್ನು ಬೋಧಿಸಿದರು. ಅದನ್ನು ನೀನು ಕೇಳಲಿಲ್ಲ. ಅದಕ್ಕೆ ವ್ಯಥೆಪಡುತ್ತಿಲ್ಲ ತಾನೆ?

ಸುಹೃದಸ್ತ್ವದ್ಧಿತೇ ಯುಕ್ತಾನ್ ಭೀಷ್ಮದ್ರೋಣಮುಖಾನ್ ಪರೈಃ ।
ನಿಹತಾನ್ ಯುಧಿ ಸಂಸ್ಮೃತ್ಯ ಕಚ್ಚಿನ್ನ ಕುರುಷೇ ವ್ಯಥಾಮ್ ॥೭॥

ನಿನ್ನ ಹಿತವನ್ನೇ ಬಯಸಿದ ಬಂಧುಗಳಾದ ಭೀಷ್ಮ-ದ್ರೋಣಾದಿಗಳು ಯುದ್ಧದಲ್ಲಿ ಮಡಿದುದನ್ನು ನೆನೆದು ವ್ಯಥೆಪಡುತ್ತಿಲ್ಲ ತಾನೆ?

ರಾಮನಾರದಕಣ್ವಾದ್ಯೈರ್ಹಿತಮುಕ್ತಂ ಸಭಾತಲೇ ।
ನ ಗೃಹೀತಮನುಸ್ಮೃತ್ಯ ಕಚ್ಚಿನ್ನ ಕುರುಷೇ ವ್ಯಥಾಮ್ ॥೮॥

ಸಭೆಯ ಅಂಗಣದಲ್ಲಿ ಪರಶುರಾಮ ನಾರದ ಕಣ್ವ ಮುಂತಾದವರು ಹಿತೋಪದೇಶ ಮಾಡಿದರೂ ಅದನ್ನು ಕೇಳದಿದ್ದುದನ್ನು ನೆನೆದು ವ್ಯಥೆಪಡುತ್ತಿಲ್ಲ ತಾನೆ?

ತಮೇವಂವಾದಿನಂ ರಾಜಾ ಸೂತಪುತ್ರಂ ಕೃತಾಂಜಲಿಮ್ ।
ಸುದೀರ್ಘಮಥ ನಿಃಶ್ವಸ್ಯ ದುಃಖಾರ್ತ ಇದಮಬ್ರವೀತ್ ॥೯॥

ಸಂಜಯನು ಕೈಮುಗಿದು ಹೀಗೆ ಹೇಳಿದಾಗ ರಾಜನು ದುಃಖಾರ್ತನಾಗಿ ನಿಟ್ಟುಸಿರಿಟ್ಟು ಹೇಳಿದ—

**ಧೃತರಾಷ್ಟ್ರ:**

**ಆಪಗೇಯೇ ಹತೇ ಶೂರೇ ದಿವ್ಯಾಸ್ತ್ರವತಿ ಸಂಜಯ ।**
**ದ್ರೋಣೇ ಚ ಪರಮೇಷ್ವಾಸೇ ಭೃಶಂ ಮೇ ವ್ಯಥಿತಂ ಮನಃ ॥೧೦॥**

ಸಂಜಯ, ದಿವ್ಯಾಸ್ತ್ರಗಳನ್ನು ಹೊಂದಿದ್ದ ಶೂರನಾದ ಭೀಷ್ಮನೂ ಮಹಾ ಬಿಲ್ಲುಗಾರನಾದ ದ್ರೋಣನೂ ಹತನಾದಾಗ ನನ್ನ ಮನಸ್ಸು ಬಹಳ ವ್ಯಥೆಗೆ ಈಡಾಯಿತು.

**ಯೋ ರಥಾನಾಂ ಸಹಸ್ರಾಣಿ ದಂಸಿತಾನಾಂ ದಶೈವ ತು ।**
**ಅಹನ್ಯಹನಿ ತೇಜಸ್ವೀ ನಿಜಘ್ನೇ ವಸುಸಂಭವಃ ॥೧೧॥**

**ತಂ ಹತಂ ಯಜ್ಞಸೇನಸ್ಯ ಪುತ್ರೇಣೇಹ ಶಿಖಂಡಿನಾ ।**
**ಪಾಂಡವೇಯಾಭಿಗುಪ್ತೇನ ಶ್ರುತ್ವಾ ಮೇ ವ್ಯಥಿತಂ ಮನಃ ॥೧೨॥**

ಭೀಷ್ಮನು ಕವಚಧಾರಿಗಳಾದ ಹತ್ತುಸಾವಿರ ರಥಿಕರನ್ನು ಪ್ರತಿದಿನ ಸಂಹರಿಸುತ್ತಿದ್ದ. ವಸುಗಳ ಅವತಾರನಾದ ಆತ ತೇಜಸ್ವಿಯಾಗಿದ್ದ. ಅವನನ್ನು ಅರ್ಜುನನಿಂದ ರಕ್ಷಿತನಾದ ಶಿಖಂಡಿ ಕೊಂದುದನ್ನು ಕೇಳಿ ನನ್ನ ಮನಸ್ಸು ವ್ಯಥೆಗೊಂಡಿತು.

**ಭಾರ್ಗವಃ ಪ್ರದದೌ ಯಸ್ಮೈ ಪರಮಾಸ್ತ್ರಂ ಮಹಾಹವೇ ।**
**ಸಾಕ್ಷಾದ್ ರಾಮೇಣ ಯೋ ಬಾಲ್ಯೇ ಧನುರ್ವೇದ ಉಪಾಕೃತಃ ॥೧೩॥**

ಸಾಕ್ಷಾತ್ ಪರಶುರಾಮನು ದ್ರೋಣರನ್ನು ಬಾಲ್ಯದಲ್ಲಿಯೇ ಧನುರ್ವೇದದಲ್ಲಿ ತರಬೇತುಗೊಳಿಸಿದ್ದ. ಮಹಾಯುದ್ಧಕ್ಕೆ ಯೋಗ್ಯವಾದ ಮಹಾಸ್ತ್ರವನ್ನು ಅವನಿಗೆ ಉಪದೇಶಿಸಿದ್ದ.

**ಯಸ್ಯ ಪ್ರಸಾದಾತ್ ಕೌಂತೇಯಾ ರಾಜಪುತ್ರಾ ಮಹಾರಥಾಃ ।**
**ಮಹಾರಥತ್ವಂ ಸಂಪ್ರಾಪ್ತಾಸ್ತಥಾಽನ್ಯೇ ವಸುಧಾಧಿಪಾಃ ॥೧೪॥**

ಆ ದ್ರೋಣರ ಅನುಗ್ರಹದಿಂದ ಪಾಂಡವರೂ ಬೇರೆ ರಾಜರೂ

ರಾಜಕುಮಾರರೂ ಮಹಾರಥರಾಗುವುದಕ್ಕೆ ಶಿಕ್ಷಣ ಪಡೆದು ಮಹಾರಥರು ಎನಿಸಿದರು.

**ತಂ ದ್ರೋಣಂ ನಿಹತಂ ಶ್ರುತ್ವಾ ಧೃಷ್ಟದ್ಯುಮ್ನೇನ ಸಂಯುಗೇ ।**
**ಸತ್ಯಸಂಧಂ ಮಹೇಷ್ವಾಸಂ ಭೃಶಂ ಮೇ ವ್ಯಥಿತಂ ಮನಃ ॥೧೫॥**

ಸತ್ಯಸಂಧನಾದ ಮಹಾ ಬಿಲ್ಲೋಜನಾದ ಆ ದ್ರೋಣನೂ ಕೂಡ ಯುದ್ಧದಲ್ಲಿ ಧೃಷ್ಟದ್ಯುಮ್ನನಿಂದ ಹತನಾದುದನ್ನು ಕೇಳಿ ನನ್ನ ಮನಸ್ಸು ಬಹಳ ವ್ಯಥೆಗೊಂಡಿತು.

**ಯಯೋರ್ಲೋಕೇ ಪುಮಾನಸ್ತ್ರೇ ನ ಸಮೋಽಸ್ತಿ ಚತುರ್ವಿಧೇ ।**
**ತೌ ದ್ರೋಣಭೀಷ್ಮೌ ಶ್ರುತ್ವಾ ತು ಹತೌ ಮೇ ವ್ಯಥಿತಂ ಮನಃ ॥೧೬॥**

ಚತುರ್ವಿಧವಾದ ಅಸ್ತ್ರವಿದ್ಯೆಯಲ್ಲಿ ದ್ರೋಣರಿಗೆ ಸಮನಾದ ಪುರುಷ ಲೋಕದಲ್ಲಿಲ್ಲ. ಅವರೂ ಹತರಾದುದನ್ನು ಕೇಳಿ ನನ್ನ ಮನಸ್ಸು ವ್ಯಥೆಗೊಂಡಿತು.

ಆದಾನ–ಅಭಿಮಂತ್ರಣ–ಸಂಧಾನ–ಪ್ರಯೋಗಗಳೆಂದು ಅಸ್ತ್ರವಿದ್ಯೆ ನಾಲ್ಕು ಬಗೆ. ಮಂತ್ರ–ಬಾಣ–ಪ್ರಯೋಗ–ಉಪಸಂಹಾರಗಳೆಂದೂ ನಾಲ್ಕು ಬಗೆ. ಚತುರ್ವಿಧ ಅಸ್ತ್ರಗಳು: ಎಂದರೆ ಮುಕ್ತಾಮುಕ್ತ, ಅಮುಕ್ತ, ಕರಮುಕ್ತ, ಯಂತ್ರಮುಕ್ತ ಎಂದು ನಾಲ್ಕು ಬಗೆಯ ಆಯುಧಗಳು. ಈಟಿ ಮುಂತಾದವು ಕೈಯಿಂದ ಪ್ರಯೋಗಿಸುವವು ಕರಮುಕ್ತ ಅಸ್ತ್ರಗಳು, ಬಾಣ ಪಾಷಾಣಗಳು ಯಂತ್ರಮುಕ್ತಗಳು, ಕೋಲು ಬಡಿಗೆಗಳು ಮುಕ್ತಾಮುಕ್ತಗಳು, ಸಣ್ಣ ಕತ್ತಿ ಚೂರಿಗಳು ಅಮುಕ್ತ ಅಸ್ತ್ರಗಳು.

**ತ್ರೈಲೋಕ್ಯೇ ಯಸ್ಯ ಚಾಸ್ತ್ರೇಷು ನ ಪುಮಾನ್ ವಿದ್ಯತೇ ಸಮಃ ।**
**ತಂ ದ್ರೋಣಂ ನಿಹತಂ ಶ್ರುತ್ವಾ ಕಿಮಕುರ್ವತ ಮಾಮಕಾಃ ॥೧೭॥**

ಮೂರ್ಲೋಕದಲ್ಲಿ ಅಸ್ತ್ರವಿದ್ಯೆಗಳಲ್ಲಿ ದ್ರೋಣರಿಗೆ ಸಮನಾದ ಪುರುಷನಿಲ್ಲ. ಅಂಥ ದ್ರೋಣರೂ ಹತನಾದುದನ್ನು ಕೇಳಿ ನನ್ನವರು ಏನು ಮಾಡಿದರು?

**ಸಂಶಪ್ತಕಾನಾಂ ಚ ಬಲೇ ಪಾಂಡವೇನ ಮಹಾತ್ಮನಾ ।**
**ಧನಂಜಯೇನ ವಿಕ್ರಮ್ಯ ಗಮಿತೇ ಯಮಸಾದನಮ್ ॥೧೮॥**

**ನಾರಾಯಣಾಸ್ತ್ರೇ ಚ ಹತೇ ದ್ರೋಣಪುತ್ರಸ್ಯ ಧೀಮತಃ ।**
**ವಿಪ್ರದ್ರುತೇಷ್ವನೀಕೇಷು ಕಿಮಕುರ್ವತ ಮಾಮಕಾಃ ॥೧೯॥**

ಸಂಶಪ್ತಕರ ಸೈನ್ಯವನ್ನು ಮಹಾತ್ಮ ಅರ್ಜುನ ಪರಾಕ್ರಮದಿಂದ ಯಮಲೋಕಕ್ಕೆ ಕಳಿಸಿದಾಗ, ಧೀಮಂತ ಅಶ್ವತ್ಥಾಮನ ನಾರಾಯಣಾಸ್ತ್ರವೂ ಆಗ್ನೇಯಾಸ್ತ್ರವೂ ಕೂಡ ಶಾಂತವಾದಾಗ, ನಮ್ಮ ಸೈನ್ಯವೆಲ್ಲವೂ ಪಲಾಯನ ಮಾಡಿದಾಗ, ನಮ್ಮವರೇನು ಮಾಡಿದರು?

ಆಗ್ನೇಯಾಸ್ತ್ರಕ್ಕೆ ವಾರುಣಾಸ್ತ್ರವು ಪ್ರತ್ಯಸ್ತ್ರವಾಗಬಲ್ಲುದು. ಆದರೆ ನಾರಾಯಣಾಸ್ತ್ರಕ್ಕೆ ಪ್ರತ್ಯಸ್ತ್ರವಿಲ್ಲ. ಅದರಿಂದ ಕೇವಲ ನಾರಾಯಣಾಸ್ತ್ರದ ಉಲ್ಲೇಖವಿದೆ.

**ವಿಪ್ರದ್ರುತಾನಹಂ ಮನ್ಯೇ ನಿಮಗ್ನಾನ್ ಶೋಕಸಾಗರೇ ।**
**ಪ್ಲವಮಾನಾನ್ ಹತೇ ದ್ರೋಣೇ ಸನ್ನನೌಕಾನಿವಾರ್ಣವೇ ॥೨೦॥**

ನೌಕೆ ಸಮುದ್ರದಲ್ಲಿ ಒಡೆದಾಗ ಪ್ರಯಾಣಿಕರು ಈಜುವಂತೆ ದ್ರೋಣರು ಹತರಾದಾಗ ನಮ್ಮವರು ಶೋಕಸಾಗರದಲ್ಲಿ ಮುಳುಗಿ ಈಜಿ ಪಲಾಯನ ಮಾಡಿದರೆಂದೇ ಭಾವಿಸುತ್ತೇನೆ.

**ದುರ್ಯೋಧನಸ್ಯ ಕರ್ಣಸ್ಯ ಭೋಜಸ್ಯ ಕೃತವರ್ಮಣಃ ।**
**ಮದ್ರರಾಜಸ್ಯ ಶಲ್ಯಸ್ಯ ದ್ರೌಣೇಶ್ಚೈವ ಕೃಪಸ್ಯ ಚ ॥೨೧॥**

**ಮತ್ಪುತ್ರಸ್ಯ ಚ ಶೇಷಸ್ಯ ತಥಾಽನ್ಯೇಷಾಂ ಚ ಸಂಜಯ ।**
**ವಿಪ್ರದ್ರುತೇಷ್ವನೀಕೇಷು ಮುಖವರ್ಣೋಽಭವತ್ ಕಥಮ್ ॥೨೨॥**

ದುರ್ಯೋಧನ, ಕರ್ಣ, ಯದುವಂಶದ ಕೃತವರ್ಮ, ಮದ್ರರಾಜ ಶಲ್ಯ, ಅಶ್ವತ್ಥಾಮ, ಕೃಪ, ನನ್ನ ಉಳಿದ ಮಕ್ಕಳು, ಬೇರೆ ರಾಜರು, ಇವರೆಲ್ಲರ ಸೈನ್ಯಗಳು ಪಲಾಯನ ಮಾಡಿದಾಗ, ಅವರ ಮುಖವರ್ಣ ಹೇಗಿತ್ತು ಸಂಜಯ?

**ಏತತ್ಸರ್ವಂ ಯಥಾವೃತ್ತಂ ಮಯಾ ಗಾವಲ್ಗಣೇ ಮಮ ।**
**ಆಚಕ್ಷ್ವ ಪಾಂಡವೇಯಾನಾಂ ಮಾಮಕಾನಾಂ ಚ ವಿಕ್ರಮಮ್ ॥೨೩॥**

ಸಂಜಯ, ಇದೆಲ್ಲವನ್ನೂ ಯಥಾವತ್ತಾಗಿ ನನಗೆ ಹೇಳು, ಪಾಂಡವರು ಮತ್ತು ನನ್ನವರು ತೋರಿದ ಯುದ್ಧ ಪರಾಕ್ರಮವನ್ನು ಹೇಳು.

**ಸಂಜಯಃ**

**ತವಾಪರಾಧಾದ್ಯದ್ ವೃತ್ತಂ ಕೌರವೇಯೇಷು ಮಾರಿಷ ।**
**ತಚ್ಛ್ರುತ್ವಾ ಮಾ ವ್ಯಥಾಂ ಕಾರ್ಷೀರ್ದಿಷ್ಟೇ ನ ವ್ಯಥತೇ ಬುಧಃ ॥೨೪॥**

ಸಂಜಯನು ಹೇಳುತ್ತಾನೆ– ರಾಜನೆ, ನಿನ್ನ ತಪ್ಪಿಂದಾಗಿ ಕೌರವ ಸೈನಿಕರಲ್ಲಿ ಉಂಟಾದ ಅನಾಹುತ, ಕ್ಲೇಶಗಳನ್ನು ಕೇಳಿ ನೀನು ವ್ಯಥೆ ಪಡಬೇಡ. ದೈವಸಂಕಲ್ಪಕ್ಕೆ ತಿಳಿದವನು ವ್ಯಥೆ ಪಡುವುದಿಲ್ಲ.

**ಯಸ್ಮಾದಭಾವೀ ಭಾವೀ ವಾ ಭವೇದರ್ಥೋ ನರಂ ಪ್ರತಿ ।**
**ಅಪ್ರಾಪ್ತೌ ತಸ್ಯ ವಾ ಪ್ರಾಪ್ತೌ ನ ಕಶ್ಚಿದ್ ವ್ಯಥತೇ ಬುಧಃ ॥೨೫॥**

ದೈವಸಂಕಲ್ಪಾನುಸಾರ ಅಭೀಷ್ಟವು ಮಾನವನಿಗೆ ಲಭಿಸಬಹುದು, ಲಭಿಸದಿರಬಹುದು. ಅದು ಲಭಿಸದಿದ್ದರೂ ಲಭಿಸಿದರೂ ತಿಳಿದವನು ಯಾವನೂ ಅದಕ್ಕೆ ಸ್ಪಂದಿಸುವುದಿಲ್ಲ.

**ಧೃತರಾಷ್ಟ್ರಃ**

**ನ ವ್ಯಥಾಽಭ್ಯಧಿಕಾ ಕಾಚಿದ್ ವಿದ್ಯತೇ ಮಮ ಸಂಜಯ ।**
**ದಿಷ್ಟಮೇತತ್ ಪುರಾ ಮನ್ಯೇ ಕಥಯಸ್ವ ಯಥೇಪ್ಸಿತಮ್ ॥೨೬॥**

ಧೃತರಾಷ್ಟ್ರ ಹೇಳುತ್ತಾನೆ— ಹೆಚ್ಚಿನ ವ್ಯಥೆ ಏನೂ ನನಗೆ ಇಲ್ಲ, ಸಂಜಯ! ಇದು ದೈವಸಂಕಲ್ಪವೆಂದು ನಾನು ತಿಳಿದೇ ಇದ್ದೇನೆ. ನಡೆದ ವೃತ್ತಾಂತವನ್ನು ಯಥೇಚ್ಛ ಹೇಳು.

ಇತಿ ಶ್ರೀಮನ್ಮಹಾಭಾರತೇ ಶತಸಾಹಸ್ರಿಕಾಯಾಂ ಸಂಹಿತಾಯಾಂ
ವೈಯಾಸಿಕ್ಯಾಂ ಕರ್ಣಪರ್ವಣಿ ದ್ವಿತೀಯೋಽಧ್ಯಾಯಃ ॥೨॥



# ಮೂರನೆಯ ಅಧ್ಯಾಯ

ಕರ್ಣವಧೆಯ ಸಂಕ್ಷೇಪ

**ಸಂಜಯಃ**

ಹತೇ ದ್ರೋಣೇ ಮಹೇಷ್ವಾಸೇ ತವ ಪುತ್ರಾ ಮಹಾರಥಾಃ ।
ಬಭೂವುರಸ್ವಸ್ಥಮುಖಾ ವಿಷಣ್ಣಾ ಗತಚೇತಸಃ ॥೧॥

ಅವಾಙ್ಮುಖಾಃ ಶಸ್ತ್ರಭೃತಃ ಸರ್ವ ಏವ ವಿಶಾಂಪತೇ ।
ಅವೇಕ್ಷಮಾಣಾಃ ಶೋಕಾರ್ತಾ ನಾಭ್ಯಭಾಷನ್ ಪರಸ್ಪರಮ್ ॥೨॥

ಸಂಜಯ ಹೇಳುತ್ತಾನೆ— ಮಹಾ ಬಿಲ್ಗಾರನಾದ ದ್ರೋಣ ಹತನಾದಾಗ ಮಹಾರಥರಾದ ನಿನ್ನ ಮಕ್ಕಳು ಮುಖ ಬಾಡಿಸಿಕೊಂಡು ವಿಷಾದದಿಂದ ದಿಕ್ಕು ತೋಚದವರಾಗಿ ಮುಖ ತಗ್ಗಿಸಿಕೊಂಡು ಕುಳಿತರು. ಪರಸ್ಪರ ಮುಖಾವಲೋಕನ ಗೈದರೂ ಶೋಕಾರ್ತರಾಗಿದ್ದು ಏನೂ ಮಾತಾಡಲಿಲ್ಲ.

ತಾನ್ ದೃಷ್ಟ್ವಾ ವ್ಯಥಿತಾಕಾರಾನ್ ಸೈನ್ಯಾನಿ ತವ ಭಾರತ ।
ಊರ್ಧ್ವಮೇವ ನಿರೈಕ್ಷಂತ ದುಃಖತಪ್ತಾನ್ಯನೇಕಶಃ ॥೩॥

ಈ ಸ್ಥಿತಿಯಲ್ಲಿ ಅವರ ವ್ಯಥೆಯನ್ನು ವ್ಯಕ್ತಗೊಳಿಸುವ ಮುಖಚರ್ಯೆಯನ್ನು ಮತ್ತೆಮತ್ತೆ ಕಂಡ ನಿನ್ನ ಸೈನಿಕರು ದುಃಖತಪ್ತರಾಗಿ ಮೇಲೆ ಆಗಸದ ಕಡೆಗೇ ನೋಡಿದರು.

ಶಸ್ತ್ರಾಣ್ಯೇಷಾಂ ತು ರಾಜೇಂದ್ರ ಶೋಣಿತಾಕ್ತಾನಿ ಸರ್ವಶಃ ।
ಪ್ರಾಭ್ರಶ್ಯಂತ ಕರಾಗ್ರೇಭ್ಯೋ ದೃಷ್ಟ್ವಾ ದ್ರೋಣಂ ಹತಂ ಯುಧಿ ॥೪॥

ಮಹಾರಾಜ, ಪೂರ್ತಿ ನೆತ್ತರಿಂದ ತೊಯ್ದ ಅವರ ಆಯುಧಗಳು, ಯುದ್ಧದಲ್ಲಿ ದ್ರೋಣ ಹತನಾದುದನ್ನು ಕಂಡೊಡನೆ, ಕೈತುದಿಗಳಿಂದ ಕೆಳಗೆ ಜಾರಿದುವು. ಇದು ಅನಿಷ್ಟ ಸೂಚಕ.

ತಾನಿ ಬದ್ಧಾನ್ಯರಿಷ್ಟಾನಿ ಲಂಬಮಾನಾನಿ ಭಾರತ ।
ಅದೃಶ್ಯಂತ ಮಹಾರಾಜ ನಕ್ಷತ್ರಾಣಿ ಯಥಾ ದಿವಿ ॥೫॥

ಮಹಾರಾಜ, ಆಕಾಶದಿಂದ ಕೆಳಗೆ ಜಾರುವ ನಕ್ಷತ್ರಗಳಂತೆ, ಸೊಂಟಕ್ಕೆ ಕಟ್ಟಿದ್ದ ಅವರ ಆಯುಧಗಳೂ ಕೂಡ ಕೆಳಮುಖವಾಗಿ ನೇತಾಡುತ್ತ ಅರಿಷ್ಟಸೂಚಕವಾದುವು.

**ತಥಾ ತು ಸ್ತಿಮಿತಂ ದೃಷ್ಟ್ವಾ ಗತಸತ್ವಮವಸ್ಥಿತಮ್ ।**
**ಬಲಂ ತವ ಮಹಾರಾಜ ರಾಜಾ ದುರ್ಯೋಧನೋಽಬ್ರವೀತ್ ॥೬॥**

ಹಾಗೆ ಶಕ್ತಿಗುಂದಿ ಸ್ತಬ್ಧವಾಗಿ ನಿಂತ ನಿನ್ನ ಸೈನ್ಯವನ್ನು ಕಂಡು ರಾಜಾ ದುರ್ಯೋಧನ ನುಡಿದ.

**ಭವತಾಂ ಬಾಹುವೀರ್ಯಂ ಹಿ ಸಮಾಶ್ರಿತ್ಯ ಮಯಾ ಯುಧಿ ।**
**ಪಾಂಡವೇಯಾಃ ಸಮಾಹೂತಾ ಯುದ್ಧಂ ಚೇದಂ ಪ್ರವರ್ತಿತಮ್ ॥೭॥**

ನಿಮ್ಮ ಬಾಹುಬಲವನ್ನು ನೆಚ್ಚಿ ನಾನು ಯುದ್ಧಕ್ಕೆ ಪಾಂಡವಸೈನಿಕರನ್ನು ಆಹ್ವಾನಿಸಿದ್ದೇನೆ. ಅದರಂತೆ ಯುದ್ಧ ನಡೆಯುತ್ತಿದೆ.

**ತದಿದಂ ನಿಹತೇ ದ್ರೋಣೇ ವಿಷಣ್ಣಮಿವ ಲಕ್ಷ್ಯತೇ ।**
**ಯುಧ್ಯಮಾನಾಶ್ಚ ಸಮರೇ ಯೋಧಾ ವಧ್ಯಂತಿ ಸರ್ವಶಃ ॥೮॥**

**ಜಯೋ ವಾಽಪಿ ವಧೋ ವಾಽಪಿ ಯುಧ್ಯಮಾನಸ್ಯ ಸಂಯುಗೇ ।**
**ಭವೇತ್ ಕಿಮತ್ರ ಚಿತ್ರಂ ವೈ ಯುಧ್ಯಧ್ವಂ ಸರ್ವತೋಮುಖಾಃ ॥೯॥**

ಆದರೆ, ದ್ರೋಣ ಹತನಾದೊಡನೆ ಆ ನಿಮ್ಮ ಬಾಹುಬಲ ಕುಗ್ಗಿದಂತೆ ಕಾಣುತ್ತಿದೆ. ರಣರಂಗದಲ್ಲಿ ಹೋರಾಡುವ ಯೋಧರು ಸಾಮಾನ್ಯವಾಗಿ ಶತ್ರುಗಳಿಂದ ಹತರಾಗುತ್ತಲೆ ಇರುತ್ತಾರೆ. ಅವರು ಹೋರಾಡುವಾಗ ಯುದ್ಧದಲ್ಲಿ ಕೆಲವೊಮ್ಮೆ ಜಯವೋ ವಧೆಯೋ ಸಂಭವಿಸಬಹುದು. ಅದರಲ್ಲಿ ಆಶ್ಚರ್ಯವೇನಿದೆ? ನೀವಂತೂ ಸರ್ವತೋಮುಖವಾಗಿ ಹೋರಾಡುತ್ತಿರಿ.

**ಪಶ್ಯಧ್ವಂ ಚ ಮಹಾತ್ಮಾನಂ ಕರ್ಣಂ ವೈಕರ್ತನಂ ಯುಧಿ ।**
**ಪ್ರಚರಂತಂ ಮಹೇಷ್ವಾಸಂ ದಿವ್ಯೈರಸ್ತ್ರೈರ್ಮಹಾಬಲಮ್ ॥೧೦॥**

ಮತ್ತು ಮಹಾತ್ಮಾ ವೈಕರ್ತನ ಕರ್ಣನು ದಿವ್ಯಾಸ್ತ್ರಗಳಿಂದ ಬಲಿಷ್ಠನಾಗಿ ಮಹಾಧನುರ್ಧಾರಿಯಾಗಿ ರಣರಂಗದಲ್ಲಿ ಸಂಚರಿಸುವುದನ್ನು ಗಮನಿಸಿರಿ.

ಯಸ್ಯ ವೈ ಯುಧಿ ಸಂತ್ರಾಸಾತ್ ಕುಂತೀಪುತ್ರೋ ಧನಂಜಯಃ ।
ನಿವರ್ತತೇ ಸದಾ ಮಂದಃ ಸಿಂಹಾತ್ ಕ್ಷುದ್ರಮೃಗೋ ಯಥಾ ॥೧೧॥

ಕರ್ಣನಿಗೆ ಹೆದರಿ ಅಲ್ಪಶಕ್ತನಾದ ಕುಂತೀಪುತ್ರ ಅರ್ಜುನ ಸಿಂಹಕ್ಕೆ ಹೆದರುವ ಅಲ್ಪಮೃಗದಂತೆ ರಣರಂಗದಿಂದ ಸದಾ ಹಿಂದೆ ಸರಿಯುತ್ತಾನೆ.

ಯೇನ ನಾಗಾಯುತಪ್ರಾಣೋ ಭೀಮಸೇನೋ ಮಹಾಬಲಃ ।
ಮಾನುಷೇಣೈವ ಯುದ್ಧೇನ ತಾಮವಸ್ಥಾಂ ಪ್ರವೇಶಿತಃ ॥೧೨॥

ಹತ್ತು ಸಾವಿರ ಆನೆಗಳ ಬಲವಿರುವ ಮಹಾಬಲಿ ಭೀಮಸೇನನನ್ನು ಕೂಡ ಕರ್ಣನು ದಿವ್ಯಾಸ್ತ್ರಪ್ರಯೋಗವಿಲ್ಲದೆ ಕೇವಲ ಮಾನುಷ ಯುದ್ಧದಿಂದಲೇ, ಹಿಂದೆ ನೀವೇ ಕಂಡಿರುವಂತೆ ದುರವಸ್ಥೆಗೆ ಈಡುಮಾಡಿದ್ದಾನೆ.

ಯೇನ ದಿವ್ಯಾಸ್ತ್ರವಿಚ್ಛೂರೋ ಮಾಯಾವೀ ಸ ಘಟೋತ್ಕಚಃ ।
ಅಮೋಘಯಾ ರಣೇ ಶಕ್ತ್ಯಾ ನಿಹತೋ ಭೈರವಂ ನದನ್ ॥೧೩॥

ದಿವ್ಯಾಸ್ತ್ರವನ್ನು ತಿಳಿದಿರುವ ಶೂರನೂ ಮಾಯಾವಿಯೂ ಆದ ಆ ಘಟೋತ್ಕಚನನ್ನು ಕೂಡ ಕರ್ಣನು ರಣರಂಗದಲ್ಲಿ ಭಯಂಕರ ಗರ್ಜನೆ ಮಾಡುತ್ತ ಅಮೋಘವಾದ ಶಕ್ತ್ಯಾಯುಧದಿಂದ ಸಂಹರಿಸಿದ್ದಾನೆ.

ತಸ್ಯ ದುರ್ವಾರವೀರ್ಯಸ್ಯ ಸತ್ಯಸಂಧಸ್ಯ ಧೀಮತಃ ।
ಬಾಹ್ವೋರ್ದ್ರವಿಣಮಕ್ಷಯ್ಯಮದ್ಯ ದ್ರಕ್ಷ್ಯಥ ಸಂಯುಗೇ ॥೧೪॥

ಸತ್ಯಸಂಧನಾದ ಧೀಮಂತನಾದ ಆ ಕರ್ಣನ ಪರಾಕ್ರಮವನ್ನು ಯಾರಿಗೂ ತಡೆಯಲಾಗದು. ಅಕ್ಷಯವಾದ ಅವನ ಬಾಹುಬಲದ ಸಂಪತ್ತನ್ನು ಇಂದು ಯುದ್ಧದಲ್ಲಿ ಪ್ರತ್ಯಕ್ಷ ಕಾಣಲಿರುವಿರಿ.

ದ್ರೋಣಪುತ್ರಸ್ಯ ವಿಕ್ರಾಂತಂ ರಾಧೇಯಸ್ಯೈವ ಚೋಭಯೋಃ ।
ಪಶ್ಯಂತು ಪಾಂಡುಪುತ್ರಾಸ್ತೇ ವಿಷ್ಣುವಾಸವಯೋರಿವ ॥೧೫॥

ವಿಷ್ಣು–ಇಂದ್ರರ ಪರಾಕ್ರಮದಂತೆಯೇ ಅಶ್ವತ್ಥಾಮ–ಕರ್ಣರಿಬ್ಬರ ಪರಾಕ್ರಮ ಇರುವುದನ್ನು ಆ ಪಾಂಡವರು ಕಣ್ಣಾರೆ ಕಾಣಲಿ

